# ಬೇಲೂರು ★ ಹಳೇಬೀಡು
# ಶ್ರವಣಬೆಳಗೊಳ



ಧರ್ಮಸ[illegible] )



ಕುಕ್ಕೆ ಸುಬ್ರಹ್ಮಣ್ಯ



ಈ ದೇವಾಲಯಗಳ

## ವಿಹಂಗಮ★ದೃಷ್ಟಿ

ಬೇಲೂರು-ಹಳೇಬೀಡು-ಶ್ರವಣಬೆಳಗೊಳ

ಶ್ರೀ ಧರ್ಮಸ್ಥಳ ಕ್ಷೇತ್ರ-ಶ್ರೀ ಕುಕ್ಕೆ ಸುಬ್ರಹ್ಮಣ್ಯ

ಈ ದೇವಾಲಯಗಳ

# ವಿಹಂಗಮ ದೃಷ್ಟಿ

ಚತುರ್ಥ ಮುದ್ರಣ 1000 ಪ್ರತಿಗಳು.

ಲೇಖಕರು:

ಬೇಲೂರು ನಾಗಪ್ಪಾಚಾರ್ಯರು.

ಪ್ರಕಾಶಕರು;

ಬಿ. ಎಲ್. ಆನಂದರಾವ್, ಬೇಲೂರು.



ಬೆಲೆ: 50 ಪೈಸೆ.

**ಲೇಖಕರ ಮನವಿ—**

ಈ ಪುಸ್ತಕದಲ್ಲಿ ಕಂಡ ವಿಷಯಗಳಲ್ಲಿ ಕೆಲವು ಮೈಸೂರು ಸಂಸ್ಥಾನದ ಪ್ರಾಚ್ಯಸಂಶೋಧನಾ ಇಲಾಖೆಯ ಡೈರೆಕ್ಟರ್‌ರವರಾಗಿದ್ದು ದಿವಂಗತರಾಗಿರುವ ಮಾನ್ಯ ಡಾ॥ ಎಂ ಹೆಚ್. ಕೃಷ್ಣ, M.A., P.H.D., ಯವರಿಂದಲೂ, ನನ್ನ ಹಿರಿಯ ಸ್ನೇಹಿತರಾಗಿದ್ದ ದಿವಂಗತ ಮುತ್ತೂಭಟ್ಟರವರಿಂದಲೂ ತಿಳಿದು ಜ್ಞಾಪಕದಲ್ಲಿದ್ದ ಸಂಗತಿಯಾಗಿರುತ್ತೆ. ಈ ರೀತಿ ಒಂದು ಚಿಕ್ಕ ಪುಸ್ತಕವನ್ನು ಹೊರಡಿಸಲು ಶ್ರೀಮಾನ್ ತಾ. ರಾ. ಸುಬ್ಬರಾಯರೂ ಪ್ರೋತ್ಸಾಹವನ್ನಿತ್ತಿದ್ದರು ಶ್ರೀಮಾನ್ ಕೊಂಡಿ ಸುಬ್ಬಣ್ಣಾಚಾರ್ಯರು ಕೆಲವು ಶ್ಲೋಕಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಹಾಸನದ ಪ್ರೌಢಶಾಲಾ ಪ್ರಾಧ್ಯಾಪಕರಾಗಿದ್ದ ಶ್ರೀಮಾನ್ ಎಂ ಎಸ್. ಶ್ರೀನಿವಾಸಮೂರ್ತಿ, B.Sc., B.Ed, ಯವರು ಹಳೇಬೀಡಿನ ವಿಚಾರದಲ್ಲಿ ನನಗೆ ಸಹಾಯ ನೀಡಿದ್ದಾರೆ. ಇವರೆಲ್ಲರಿಗೂ ನನ್ನ ಅನಂತ ವಂದನೆಗಳು. ವಿಸ್ತರಿಸಿ ಮುನ್ನುಡಿ ಬರೆದುಕೊಟ್ಟಿರುವ ನನ್ನ ಹಿರಿಯ ಸ್ನೇಹಿತರಾದ ದಿವಂಗತ ಆರ್. ಸೂರಪ್ಪನವರಿಗೂ ತುಂಬ ಕೃತಜ್ಞನಾಗಿದ್ದೇನೆ ಈ ಊರಿನ ಶ್ರೀ ಕೃಷ್ಣ ಪವರ್ ಪ್ರೆಸ್ಸಿನ ಮಾಲೀಕರಾದ ಶ್ರೀಮಾನ್ ಕೆ ವೆಂಕಟಕೃಷ್ಣಯ್ಯ ಅಂಡ್ ಸನ್ಸ್‌ರವರು ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಇವರಿಗೆ ನನ್ನ ಧನ್ಯವಾದಗಳು. ಈ ಕೃತಿಯನ್ನು ಬೆಳಕಿಗೆ ತಂದಿರುವ ಉತ್ಸಾಹೀ ಯುವಕರೂ, ಪುಸ್ತಕ ವ್ಯಾಪಾರಿಗಳೂ ಆದ ಶ್ರೀಮಾನ್ ಬಿ. ಎಲ್. ಆನಂದರಾಮ್‌ರವರಿಗೂ ನಾನು ಕೃತಜ್ಞ. ಶುದ್ಧಾಶುದ್ಧ ಪಟ್ಟಿಗೆ ಅವಕಾಶ ಕೊಟ್ಟಿಲ್ಲ. ಇಲ್ಲಿ ದೇವಸ್ಥಾನವನ್ನು ನೋಡಲು ಬರುವ ಪ್ರೇಕ್ಷಕರಿಗೆ ಈ ಪುಸ್ತಕವು ತುಂಬಾ ಸಹಾಯವಾಗುವುದೆಂಬ ಭರವಸೆಯುಳ್ಳವನಾಗಿದ್ದೇನೆ

—ನಾಗಪ್ಪಾಚಾರ್ಯ.

ನಮಸ್ಕಾರ ಮಾಡಿ—

ಬೇಲೂರು- ಹಳೇಬೀಡು-ಶ್ರವಣಬೆಳಗೊಳ-ಧರ್ಮಸ್ಥಳ-ಸುಬ್ರಹ್ಮಣ್ಯ ಈ ದೇವಾಲಯಗಳ ಈ ವಿಹಂಗಮ ದೃಷ್ಟಿ ಸಂಕ್ಷೇಪವಾಗಿದ್ದರೂ ವಿಷಯ ವಿಚಾರ ಪೂರಿತವಾಗಿದೆ. ಚಿರಕಾಲದಿಂದಲೂ ದೇವಾಲಯಗಳೂ ಸಮಾಜದ ಸಂಸ್ಕೃತಿ ಸರಣಿಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುತ್ತವೆ. ಘಟಿಕಾ ಮಹಾಘಟಿಕಾ ಸ್ಥಾನಗಳೆಂಬ ಅಭಿದಾನದಿಂದ ದೇವಾಲಯಗಳು ವಿದ್ಯಾಕೇಂದ್ರವಾಗಿದ್ದವು. ಇದಕ್ಕೆ ಅನೇಕ ಶಾಸನ ನಿದರ್ಶನಗಳಿವೆ ಮಾನವ ಜೀವನವೇ ಒಂದು ಕಲೆ ಈ ಕಲಾಪೂರ್ಣತೆ ಶಿಲೆಯಲ್ಲಿ ಚಿತ್ರಿಸಲ್ಪಟ್ಟು ದೇವಾಲಯಗಳು ನಿರ್ಮಿತವಾಗಿವೆ. ಈ ನಿರ್ಮಾಣದ ವಿವರಣೆಯನ್ನು ಸುಪ್ರಸಿದ್ಧ ಬೇಲೂರು ಹಳೇಬೀಡುಗಳಲ್ಲಿ ನೋಡಬಹುದು ಪಂಡಿತ ಪಾಮರರಿಗೂ ಕೂಡ ಈ ದೇವಾಲಯಗಳು ಸ್ಫೂರ್ತಿಯನ್ನು ಹುಟ್ಟಿಸಿ ಕಣ್ಮನಗಳಿಗೆ ಹಬ್ಬವನ್ನುಂಟುಮಾಡುತ್ತವೆ. ಶಿಲ್ಪ ಕಲಾ ದೃಷ್ಟಿಯಿಂದಲೂ, ಲಲಿತಕಲಾ ದೃಷ್ಟಿಯಿಂದಲೂ, ಸಮಾಜಸಂಸ್ಕೃತಿಯ ದೃಷ್ಟಿಯಿಂದಲೂ, ಕಾವ್ಯಾಲಂಕಾರ ದೃಷ್ಟಿಯಿಂದಲೂ, ದಾರ್ಶನಿಕ ತತ್ವ ದಿಂದಲೂ. ನಾಗರೀಕತೆಯ ದೃಷ್ಟಿಯಿಂದಲೂ ಹೀಗೆ ನಾನಾ ದೃಷ್ಟಿಯಿಂದಲೂ ಇದನ್ನು ಸಂಗ್ರಹ ವಿಶ್ವ (Epitome of Universe) ಎಂದು ಕರೆಯಬ ಹುದು. ಸುಪ್ರಸಿದ್ಧ ಭೂಸಂಚಾರಿಗಳು ಈ ದೇವಾಲಯಗಳನ್ನು ನೋಡಿ ಪ್ರಪಂಚದ ಆಶ್ಚರ್ಯ ವಸ್ತುಗಳಲ್ಲಿ ಇದೂ ಒಂದು ಎಂದು ಹೇಳಿದ್ದಾರೆ. ಈ ಶಿಲ್ಪದ ಕಾವ್ಯಪ್ರವಾಹವನ್ನು ವೀಕ್ಷಿಸಿ ಅನೇಕ ಸುಪ್ರಸಿದ್ಧ ಸಾಹಿತಿಗಳು (Running Music) ಎಂದು ಕೊಂಡಾಡಿದ್ದಾರೆ. ಚಿತ್ರಕಲೆಗೆ ಮೂಲ ಭೂತ ತತ್ವವಾದ ಛಾಯಾ ಪ್ರಕಾಶ (Light and Shade Principles) ಈ ಬೇಲೂರಿನ ವಾಸ್ತುಶಿಲ್ಪ ನಿರ್ಮಾಣದಲ್ಲಿ ಸಂಪೂರ್ಣ ಅನ್ವಯಿಸುತ್ತೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು ಕೌಶಲ್ಯವು ಪರಾಕಾಷ್ಠತೆ ಯನ್ನು ಪಡೆದಿರತಕ್ಕ ಈ ದೇವಸ್ಥಾನಗಳನ್ನು ನೋಡಲು ಬರುವ ಪ್ರೇಕ್ಷಕರ ಸಂಖ್ಯೆ ಮೊದಲಿಗಿಂತಲೂ ಈಗ ನೂರ್ಮಡಿ ಸಾವಿರಮಡಿ ಹೆಚ್ಚಾಗಿರುವ ಈ ಸಮಯದಲ್ಲಿ ಶ್ರೀಮಾನ್ ನಾಗಪ್ಪಾಚಾರ್ಯರಿಂದ ರಚಿತವಾಗಿರುವ ಈ ಸಂಗ್ರಹಿತ ಪುಟ್ಟ ಪುಸ್ತಕವು ಮಾರ್ಗದರ್ಶಕವಾಗಿರುವುದಲ್ಲದೆ ಈ ಕಲಾ ವಸ್ತು ಶಿಲ್ಪವು ಮೇಲ್ಪಟ್ಟದ ವ್ಯಾಸಂಗಕ್ಕೆ ಸಹಾಯ ಮಾಡಬಹುದಾಗಿ ಆಶಿಸುತ್ತೇನೆ

—ಆರ್, ಸೂರಪ್ಪ.

## ಮುನ್ನುಡಿ ಅನುವರ್ತನೆ...

ಹಿಂದಿನ ಮುನ್ನುಡಿಯಲ್ಲಿ ಸಂಕ್ಷೇಪವಾಗಿ ಸೂಚಿಸಿದ್ದನ್ನು ನನ್ನ ಮಿತ್ರರ ಅಪೇಕ್ಷೆಯಂತೆ ಸ್ವಲ್ಪ ಮುಂದುವರಿಸಿದ್ದೇನೆ. ಇದಕ್ಕೆ ಪೂರ್ವಭಾವಿ ಒಂದು ಅಂಶವನ್ನು ತಿಳಿಸಬಯಸುತ್ತೇನೆ. "Art is more felt than explained" ಕಲಾನುಭವವು ವಿವರಣೆಗಿಂತ ಮಾರಿದ್ದು. ಬೇಲೂರು ಮತ್ತು ಹಳೇಬೀಡು ದೇವಾಲಯಗಳು ಸೌಂದರ್ಯಲಹರಿ ಎಂದರೆ ಅತಿಶಯೋಕ್ತಿಯಲ್ಲ. ಈ ಸೌಂದರ್ಯಲಹರಿಯ ರಸಾಸ್ವಾದವನ್ನು ಈ ದೇವಾಲಯಕ್ಕೆ ಭೇಟಿಕೊಟ್ಟ ಪ್ರೇಕ್ಷಕರ ಸಮೂಹದಲ್ಲಿ ಪಂಡಿತಪಾಮರರೂ, ದೇಶೀಯರೂ, ವಿದೇಶೀಯರೂ, ಕಲಾಕೋವಿದರೂ ಈ ಶಿಲ್ಪ ವಾಸ್ತುಕಲೆಯ ಭಾವರಸವನ್ನು ಆಸ್ವಾದನೆಮಾಡಿರುತ್ತಾರೆ. ಗೋಪಾಲಕೃಷ್ಣನ ವೇಣುಗಾನ ಮಾಧುರ್ಯ ರಸಾಸ್ವಾದನಲ್ಲಿ ಗೋವುಗಳು ತಲ್ಲೀನವಾಗಿರುವ "ಗೋವರ್ಧನ ಧಾರಣ" ಚಿತ್ರವನ್ನು ನೋಡಿದರೆ ಪುರಾಣೇತಿಹಾಸ ಪರಿಚಿತನಾಗಲೀ, ಇಲ್ಲದಿರಲೀ ಕಲಾ ರಸಾನುಭವಕ್ಕೆ ಯಾವ ಅಡ್ಡಿ ಆತಂಕವೂ ಇಲ್ಲ. ಹಳೇಬೀಡು ಬಸ್ತಿ ಕಂಭಗಳಲ್ಲಿ ವಿವಿಧಾಂಶ ವಕ್ರಗಳಿಂದ (Different curveturs of convex and concave) ಸಾಣೆಕೊಟ್ಟಂತಕ್ಕ ಹೊಳಪಿನಲ್ಲಿ ಪ್ರತಿಫಲಿಸುವ ಬಿಂಬಗಳು ವಿವಿಧ ರೇಖರೂಪಗಳನ್ನು ತಾಳುತ್ತವೆ. ಈ ರೂಪ ಕಲೆಯಲ್ಲಿರತಕ್ಕ ದಾರ್ಶನಿಕ ತತ್ವಾರ್ಥದ್ಯೋತಕ ಹಾಗಿರಲಿ ಪ್ರಕಾಶ ಮೂಲತತ್ವ (Light Principles) ಕಲಾನಿರ್ಮಾಪಕನಿಗೆ ಎಷ್ಟರಮಟ್ಟಿನ ಕಲಾಪರಿಚಯವಿತ್ತೆಂಬುದು ವ್ಯಕ್ತವಾಗುತ್ತದೆ ಈ ಕಲಾಶಿಲ್ಪವನ್ನು ಸಮಷ್ಟಿದೃಷ್ಟಿಯಿಂದ ವ್ಯಷ್ಟಿದೃಷ್ಟಿಯಿಂದ ನೋಡತಕ್ಕವರಿಗೆ ಇದರಲ್ಲಡಗಿರುವ ಜ್ಞಾನ, ವಿಜ್ಞಾನ ಇತಿಹಾಸ ಎಲ್ಲಕ್ಕೂ ಮೇಲಾಗಿ ನವರಸಗಳ ಧಾರೆಯು ಅವಿಚ್ಛಿನ್ನವಾಗಿ ಸ್ಫುರಿಸುವುದೆಂದು ಅನೇಕ ಕಲಾವಿದರ ಅನುಭವದಲ್ಲಿರುವುದು. ಈ ದೃಷ್ಟಿಯಿಂದ ಪ್ರೇಕ್ಷಕರು ವಾಸ್ತುಶಿಲ್ಪ ಕಲಾ ದರ್ಶನಸೌಭಾಗ್ಯವನ್ನು ಪಡೆಯಬೇಕೆಂಬುದೇ ಇತ್ತೀಚಿನ ಹಳೇಬೀಡು ವಿವರಣೆ ಕೊಟ್ಟಿರುವ ಲೇಖಕರಾದ ನನ್ನ ಮಿತ್ರರ ಅಭಿಲಾಷೆ. ಇದು ಫಲಿಸಲಿ.

—ಆರ್. ಸೂರಪ್ಪ.

# ಬೇಲೂರು

॥ ಶ್ರೀ ॥

ನಮಃ ಕೇಶವ ನಾಥಾಯ । ನಯನಾನಂದ ಮೂರ್ತಯೇ ।
ವೇಲಾಪುರಿ ನಿವಾಸಾಯ । ಸತ್ಯಜ್ಞಾನಾಯ ವಿಷ್ಣವೇ ।
ಸತ್ಯಂ ಸತ್ಯಂ ಪುನಃ ಸತ್ಯಂ । ಉದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ ಪರಂನಾಸ್ತಿ । ನದೈವಂ ಕೇಶವಾತ್ಪರಂ ॥

ಎಂಬಂತೆ ಬೇಲೂರಿನ ಸುಪ್ರಸಿದ್ಧ ಶ್ರೀ ಕೇಶವಸ್ವಾಮಿ ದೇವಾಲಯವು ಚರಿತ್ರಾರ್ಹವಾಗಿಯೂ, ಶಿಲ್ಪಕಲಾ ಸೌಂದರ್ಯದಿಂದ ಪ್ರಸಿದ್ಧವಾಗಿಯೂ ಮತ್ತು ಪುರಾಣೋಕ್ತ ಇತಿಹಾಸಗಳಿಂದ ಕೂಡಿದ್ದಾಗಿರುತ್ತದೆ.

## ಮೂಲದೇವಸ್ಥಾನದ ಪ್ರತಿಷ್ಠೆ, ರಚನೆ ಮತ್ತು ಇತಿಹಾಸ



ಈ ದೇವಸ್ಥಾನವು ಹೊಯ್ಸಳ ರಾಜ್ಯದ ವಿಷ್ಣುವರ್ಧನ ಮಹಾರಾಜರಿಂದ ಕಟ್ಟಿಸಲ್ಪಟ್ಟು ಕ್ರಿಸ್ತಶಕ 1117 ನೇ ಶ್ರೀ ಹೇವಿಳಂಬಿ ನಾಮ ಸಂವತ್ಸರದ ಚೈತ್ರ ಶುದ್ಧ ಬಿದಿಗೆ ಲಾಗಾಯ್ತು ಒಂಭತ್ತು ದಿನಗಳೂ ಶಾಸ್ತ್ರೀಯವಾದ ಕಾರ್ಯಕಲಾಪಗಳು ನಡೆದು ದೇವರನ್ನು ಪ್ರತಿಷ್ಠಿಸಲಾಗಿದೆ ಶ್ರೀ ಚನ್ನಕೇಶವಸ್ವಾಮಿ ಎಂದು ಕರೆಯಲ್ಪಡುತ್ತಿರುವ ಈ ದೇವರಿಗೆ 'ವಿಜಯನಾರಾಯಣ'

ಎಂಬುದಾಗಿ ಹೆಸರು. ವಿಷ್ಣುವರ್ಧನ ಮಹಾರಾಜನು, ಕದಂಬರು, ಚೋಳರು
ಪಾಂಡ್ಯರು ಮುಂತಾದವರನ್ನು ಗೆದ್ದು ಕರ್ನಾಟಕದ ಮುಕ್ಕಾಲು ಭಾಗ ಅಂದರೆ
ಕೊಂಗು ಅಥವಾ ಸೇಲಂ, ನೀಲಗಿರಿ, ಅಣ್ಣಾಮಲೆ, ಬಾರಕೂರು, ಚಂದ್ರಗುತ್ತಿ
ಬನವಾಸಿ, ಬಂಕಾಪುರ, ಹಾನಗಲ್ಲು, ಗೋದಾವರಿಯನ್ನೊಳಗೊಂಡ ಮಥ
ಪ್ರದೇಶ ಇಲ್ಲಿನವರೆಗೆ ರಾಜ್ಯ ವಿಸ್ತರಿಸಿ ಚಕ್ರವರ್ತಿ ಎನಿಸಿಕೊಂಡು ದಿಗ್ವಿಜಯದ
ಸ್ಮಾರಕಾರ್ಥವಾಗಿ ಈ ವಿಜಯನಾರಾಯಣ ದೇವರನ್ನು ಪ್ರತಿಷ್ಠಿಸಿರುತ್ತಾನೆ.
ಮೂಲಮೂರ್ತಿಯು ಎರಡೂವರೆ ಅಡಿ ಎತ್ತರದ ಗರುಡ ದೇವರ ಪೀಠದಮೇಲೆ
ನಿಂತಿರುವುದನ್ನು ನೋಡಿದರೆ ಆ ಸುಂದರ ಮೂರ್ತಿಯ ಸೌಮ್ಯ ಕಳೆ ವೈಕುಂಠ
ದಲ್ಲಿ ಶ್ರೀಮನ್ನಾರಾಯಣನ ಸನ್ನಿಧಾನದಲ್ಲಿಯೇ ಇದ್ದೇವೆಯೋ ಏನೋ ಎಂಬ
ರೀತಿ ಭಾಸವಾಗುತ್ತದೆ. ಈ ದೇವರನ್ನು ಚನ್ನಕೇಶವಸ್ವಾಮಿ ಎನ್ನುವುದಲ್ಲದೆ
ಸೌಮ್ಯಕೇಶವಸ್ವಾಮಿ ಎಂದೂ ಕರೆಯುವ ವಾಡಿಕೆಯಿದೆ.

ಈ ಮೂರ್ತಿಯ ಉಭಯ ಪಾರ್ಶ್ವಗಳಲ್ಲಿಯೂ ಚಿಕ್ಕ ಪ್ರಮಾಣದಲ್ಲಿ
ಶ್ರೀ-ಭೂದೇವಿಯರನ್ನು ಅದರ ಅಕ್ಕಪಕ್ಕಗಳಲ್ಲಿ ಚಾಮರ ಗೃಹಿಣಿಯರನ್ನೂ
ಮಾಡಿದ್ದಾರೆ. ಮೇಲೆ ಮಕರವಾಹನರಾದ ವರುಣ ದಂಪತಿಗಳೂ, ಮೊದಲನೆ
ಸಾಲಿನಲ್ಲಿ ದಶಾವತಾರವೂ, ಎರಡನೇ ಸಾಲಿನಲ್ಲಿ ಎರಡು ಚಕ್ರವ್ಯೂಹ ಮೂರ್ತಿ
ಗಳಾದ ಕೇಶವಾದಿ ದಾಮೋದರ ಮೂರ್ತಿ ದ್ವಾದಶ ಮೂರ್ತಿಗಳೂ, ಇದರ
ಮೇಲೆ ಮೂರನೇ ಸಾಲಿನಲ್ಲಿ ಪತ್ನಿ ಸಮೇತರಾದ ಅಷ್ಟದಿಕ್ಪಾಲಕರೂ, ಮಧ್ಯೆ
ಸಿಂಹಲಲಾಟದಿಂದ ಕೂಡಿದ ಪ್ರಭಾವಳಿ ಇವುಗಳಿವೆ.

ದೇವರ ಪೀಠದಲ್ಲಿ

ಜಿಷ್ಣು ವಿಷ್ಣುರ್ಮಹೀಪಾಲ ಪಾಲಿತಾಖಿಲ ಭೂತಲಃ ।
ದೇವದೇವೇಶ ವಿಜಯ ನಾರಾಯಣ ಮಚೀಕರತ್ ॥ ಎಂತಿದೆ.

ಅದೇ ದಿನ ಅದೇ ಲಗ್ನದಲ್ಲಿ ಗದುಗಿನಲ್ಲಿ ವೀರನಾರಾಯಣ ದೇವರನ್ನೂ,
ಮೇಲುಕೋಟೆಯಲ್ಲಿ ಚೆಲುವನಾರಾಯಣ ದೇವರನ್ನೂ, ತಲಕಾಡಿನಲ್ಲಿ ಕೀರ್ತಿ
ನಾರಾಯಣ ದೇವರನ್ನೂ ಮತ್ತು ತೊಂಡನೂರಿನಲ್ಲಿ ನಂಬಿನಾರಾಯಣ ದೇವ

ರನ್ನೂ ಪ್ರತಿಷ್ಠಿಸಿರುತ್ತಾನೆ. ಅಲ್ಲದೆ ಬೇಲೂರಿನಲ್ಲಿ ತನ್ನ ಪಟ್ಟಮಹಿಷಿಯಾದ ಕದಂಬರಾಜಪುತ್ರಿ ಶಾಂತಲಾದೇವಿಯವರ ಅಪೇಕ್ಷೆಯಂತೆ "ಕಪ್ಪೆ ಚೆನ್ನಿಗರಾಯ" ಎಂದು ಕರೆಯಲ್ಪಡುತ್ತಿರುವ ಚನ್ನಕೇಶವ ದೇವರನ್ನು ಪ್ರತಿಷ್ಠಿಸಲಾಗಿದೆ. ಇದು ಪೀಠದಮೇಲೆ

ಶಾಂತಿ ಕೃತ್ಸರ್ವ ಭೂತಾನಾಂ। ಪ್ರತಿಷ್ಠಾ ವಿಷ್ಣು ಕಾಂತಾಯಾ।
ಚನ್ನಕೇಶವ ದೇವಸ್ಯ । ಶಾಂತಿ ದೇವ್ಯಾ ಕೃತೋತ್ತಮಾ ॥

'ಪಟ್ಟಮಹಾದೇವಿ' ಎಂಬುದಾಗಿದೆ.

ಈ ದೇವಸ್ಥಾನದ ಹೊರಭಾಗದ ಸಣ್ಣ ಗುಡಿಯಲ್ಲಿ ಷಟ್ಕೋಣ ಚಕ್ರವರ್ತಿ ಸುದರ್ಶನ ವಿಗ್ರಹ. ಈ ದೇವಸ್ಥಾನದಲ್ಲಿ ಎರಡು ಗರ್ಭಗೃಹಗಳಿವೆ. ಈ



ದರ್ಪಣಸುಂದರಿ

ದೇವಾಲಯದ ಗರ್ಭಗೃಹದ ಒಳಗೂ, ದೊಡ್ಡ ದೇವಸ್ಥಾನದ ವಿಜಯನಾರಾಯಣ ದೇವರು ಇರುವಲ್ಲಿ ಇರುವ ಹಾಗೆಯೇ ನೂರು ಕೆತ್ತಡಿಗಳಿವೆ. ಈ ದೇವರು ವಿಜಯನಾರಾಯಣ ದೇವರಿಗಿಂತ ಹೆಚ್ಚು ಸೌಂದರ್ಯವಾಗಿ ನಖಾ ನಾಸಿಕಾ ರಂಧ್ರಗಳೂ ಆಭರಣಗಳೂ ಎಲ್ಲವೂ ಕೆತ್ತಲ್ಪಟ್ಟಿವೆ. ಈ ಗುಡಿಯಲ್ಲಿ ಪುಸ್ತಕ ಧಾರಿಣಿ ಸರಸ್ವತಿ, ವಿಷ್ಣು, ಲಕ್ಷ್ಮಿ ಈ ಪೀಠದಲ್ಲಿ

ಆನೆ, ಮಹಿಷಾಸುರ ಮರ್ಧಿನಿ ಎಂಬುದಾಗಿ ವ್ಯವಹರಿಸುವ ಮಹಾಲಕ್ಷ್ಮೀ ವಿಗ್ರಹ ಇವುಗಳೆಲ್ಲವೂ ತುಂಬ ನಾಜೂಕಾಗಿವೆ.

ದ್ವಿತೀಯ ಪತ್ನಿ ಶ್ರೀ ಮಹಾಲಕ್ಷ್ಮಿಯವರ ಅಪೇಕ್ಷೆಯಂತೆ "ವೀರ ನಾರಾಯಣ" ಎಂದು ಕರೆಯಲ್ಪಡುತ್ತಿರುವ ಲಕ್ಷ್ಮೀನಾರಾಯಣ ದೇವರನ್ನು ಪ್ರತಿಷ್ಠಿಸಿದ್ದಾರೆ.

ಬೇಲೂರಿನಲ್ಲಿ ನಡೆದ ಈ ಪ್ರತಿಷ್ಠಾ ಕಾರ್ಯಗಳೆಲ್ಲವೂ ಶ್ರೀ ರಾಮಾನುಜಾ ಚಾರ್ಯರು ಕಳುಹಿಸಿಕೊಟ್ಟ ಅವರ ಸೋದರಳಿಯಂದಿರೂ, ಮುಖ್ಯ ಶಿಷ್ಯರೂ ಆದ ಶ್ರೀ ದಾಶರಥಿಮೊದಲಿಯಾಂಡಾರ್ಕವರ ಮೂಲಕ ಪಾದ್ಮಸಂಹಿತ ಪಾಂಚ ರಾತ್ರಾಗಮರೀತ್ಯಾ ಪೂಜಾದಿಗಳು ನಡೆಸಲ್ಪಟ್ಟಿರುತ್ತವೆ.

ಮೂರ್ತಿ ಲಕ್ಷಣವನ್ನನುಸರಿಸಿ ಈ ಮೂರೂ ಕೇಶವರ ಲಕ್ಷಣ ಪೀಠದ ಮೇಲೆ 9 ಅಡಿಯ ವಿಜಯನಾರಾಯಣಸ್ವಾಮಿ, 7 ಅಡಿಯ ಚನ್ನಕೇಶವ ಸ್ವಾಮಿ, 5 ಅಡಿಯ ಲಕ್ಷ್ಮೀನಾರಾಯಣಸ್ವಾಮಿ ಇವುಗಳೆಲ್ಲದರಮೇಲೂ ಇರುವ ಪ್ರಭಾವಳಿಯಲ್ಲಿ ದಶಾವತಾರ, ಅಷ್ಟದಿಕ್ಪಾಲಕರನ್ನೂ ಚಿತ್ರಿಸಿದ್ದಾರೆ. ಈ ಗರ್ಭಗುಡಿಗಳ ಬಾಗಿಲಿನಲ್ಲಿರುವ ಜಯ-ವಿಜಯರ ದ್ವಾರಪಾಲಕರ ವಿಗ್ರಹಗಳು ಬಹಳ ನಾಜೂಕಾದ ಕೆಲಸಗಳಿಂದ ಸುಂದರವಾಗಿ ಕೆತ್ತಲ್ಪಟ್ಟವೆ.

## ದೊಡ್ಡ ದೇವಸ್ಥಾನದ ನವರಂಗ ಯಾ ಭುವನೇಶ್ವರಿ

ಇದರ ದಕ್ಷಿಣ ದಿಕ್ಕಿನ ಮಧ್ಯಭಾಗದಲ್ಲಿ ರಾಜನ ದರ್ಬಾರು, ನೈಋತ್ಯ ದಲ್ಲಿ ಸೇವಕಿಯರೊಂದಿಗೆ ರಾಜ ಮತ್ತು ರಾಣಿ. ಈಶಾನ್ಯ ವಿನಹ ಎಲ್ಲಾ ಕಡೆ ಯಲ್ಲೂ ವಾದ್ಯದವರೂ, ನರ್ತಕ ನರ್ತಕಿಯರೂ, ಈಶಾನ್ಯದಲ್ಲಿ ಧೇನುಕಾಸುರ ಭಂಜನ, ಪೂತನಾ ವಧ, ಶಕಟಾಸುರ ಭಂಜನ, ಕುಬ್ಜಾ, ತುಂಬುರನಾರದರು ಮೂಲೆ ಪಟ್ಟಿಗಳ ಮೇಲೆ ಕಂಬಗಳ ಮಧ್ಯೆ ಪೂರ್ವದಿಕ್ಕಿನಲ್ಲಿ ನಟರಾಜ, ನರ್ತಕಿ ಕೈಲಿ ಚಿಟಿಕೆ, ತಾಂಡವ ಗಣಪತಿ, ನರ್ತಕಿ, ವಾದ್ಯಗಾರರು, ಹಾಡುವವರು, ತಾಳದವರು, ಕೊಳಲು, ನೈಋತ್ಯ ಮೂಲೆಯಲ್ಲಿ ಭಸ್ಮಾಸುರ ಮೋಹಿನಿ,

ಈಶ್ವರ, ವಾದ್ಯಗಾರರು, ಕಪಿಧ್ವಜಲಾಂಛನನಾದ ಅರ್ಜುನನಿಗೂ, ಶಾಕಧ್ವಜ ಲಾಂಛನನಾದ ಕರ್ಣನಿಗೂ ಯುದ್ಧ, ಧೃತರಾಷ್ಟ್ರ, ಭೀಮ, ದ್ರೌಪದಿ, ಶಲ್ಯ, ಧರ್ಮರಾಜ, ಅರ್ಜುನಾದಿಗಳು, ಭೀಮನನ್ನು ಭಗದತ್ತನ ಆನೆಯು ಹಿಡಿದಿರುವುದು, ಭೀಮ ಬಿಡಿಸಿಕೊಂಡು ಆನೆಯನ್ನು ಕೊಲ್ಲುವುದು, ಭೀಷ್ಮಾಚಾರ್ಯರು ಶರಪಂಜರದ ಮೇಲೆ ಮಲಗಿರುವುದು, ಅರ್ಜುನ ಕೌರವಾದಿಗಳು ಕಾಲಿನಬಳಿ ನಿಂತಿರುವುದು, ನರ್ತಕಿ, ಉಗ್ರಸೇನನ ಪಟ್ಟಾಭಿಷೇಕ ಆನೆ ಮುಂತಾದುವು ಬಂದು ಮುಜುರೆ ಮಾಡುವುದು, ಇದರ ಮೇಲ್ಭಾಗ ಯಕ್ಷರೂ, ಅಪ್ಸರರೂ ಕೇಶವಾದಿ ಮೂರ್ತಿಗಳೂ ಇವೆ. ಪ್ರತಿಯೊಂದೂ ಟೊಳ್ಳಾಗಿವೆ. ನರ್ತಕ ನರ್ತಕಿಯರೂ, ಸಿಂಹಗಳೂ ಇವೆ. ಈ ತೆರನದು ಜೈನ ಯಾತ್ರಾಸ್ಥಳವಾದ ಅಬೂ ಪರ್ವತದ ಮೇಲೆ ದಿಲೇಶ್ವರ್ ದೇವಾಲಯದಲ್ಲಿದೆ.



ಶುಕಭಾಷಿಣಿ

ಈ ಭುವನೇಶ್ವರಿಯ ಮಧ್ಯದಲ್ಲಿ ಇರುವ ಮೇತೆ ಸುಮಾರು ಮೂರೂವರೆಅಡಿ ಉದ್ದವಾಗಿದ್ದು ಒಳಗೆ ಪ್ರತಿ ಒಂದು ಅಂತಸ್ತಿನಲ್ಲು ಬ್ರಹ್ಮ ವಿಷ್ಣು ಮಹೇಶ್ವರ ಇವರನ್ನು ಮಾಡಿ ಕೆಳಗೆ ನರಸಿಂಹನನ್ನು ಕಡೆದಿದ್ದಾರೆ. ಈ ಭುವನೇಶ್ವರಿಯ ದಕ್ಷಿಣದಿಕ್ಕು ಮತ್ತು ಪಶ್ಚಿಮ ದಿಕ್ಕಿನ ತೊಲೆಯು ತುಮಕೂರು ಜಿಲ್ಲೆ ತುರುವೆ ಕೆರೆಯಿಂದ ತಂದಿರುವುದಕ್ಕೆ ಲೇಖನವಿದೆ.

## ಕಪ್ಪೆ ಚನ್ನಿಗರಾಯ ದೇವಸ್ಥಾನದ ಭುವನೇಶ್ವರಿ

ಮಧ್ಯೆ ಲಕ್ಷ್ಮೀನಾರಾಯಣ. ಅದರ ಸುತ್ತ ಅಷ್ಟದಿಕ್ಪಾಲಕರೂ. ನಂತರ ಒಂದೊಂದು ಸಾಲಿಗೆ ಆರರಂತೆ ನಾಲ್ಕು ದಿಕ್ಕಿನಿಂದ ಕೇಶವಾದಿ ಚತುರ್ವಿಂಶತಿ ಮೂರ್ತಿಗಳೂ, ಸಪ್ತ ತಾಲಾ ಛೇದನ, ವೈಕುಂಠದಲ್ಲಿ ಮಹಾವಿಷ್ಣುವನ್ನು ದೇವತೆಗಳು ರಾಮಾವತಾರ ಮಾಡಲು ಪ್ರಾರ್ಥಿಸಿದ್ದೂ ಇವೆ. ಅಂಕಗಳ ಸೀಲಿಂಗಿನಲ್ಲಿ ಧೃವ, ವರದ, ವರಾಹ ಮೂರ್ತಿಯು ಭೂದೇವಿಯನ್ನು ಎತ್ತಿರುವುದು, ಹರಿ–ಹರ ಇವುಗಳಿವೆ ಈ ದೇವಸ್ಥಾನವು ಪರಕೀಯರ ಧಾಳಿಗೆ ಸಿಕ್ಕಿ ವಿಜಯನಗರದ ಅರಸುಗಳ ಕಾಲದಲ್ಲಿ ಜೀರ್ಣೋದ್ಧಾರವಾಗಿರುವಹಾಗಿದೆ.

## ಲಕ್ಷ್ಮೀನಾರಾಯಣ ದೇವಸ್ಥಾನದ ಭುವನೇಶ್ವರಿ

ಇದೂ ಕೂಡ ಪರಕೀಯರ ಧಾಳಿಗೆ ಸಿಕ್ಕಿದ್ದು ಭುವನೇಶ್ವರಿಯು ಲೋವೆ ಕಲ್ಲುಗಳಿಗೆ ರೀಪರ್ಸ್ ಮತ್ತು ರ್‍ಯಾಫ್ಟರ್ಸ್‌ಗಳನ್ನು ಮಾಡಿದ್ದಾನೆ. ಹೊರ ಭಾಗದ ಅಲಂಕಾರಗಳಿಗೆಲ್ಲಾ + ಈ ಮುರ್ತಗಳನ್ನು ಹೆಚ್ಚಾಗಿ ಉಪಯೋಗಿಸಿದ್ದಾನೆ.

ಶಿಲಾ ಸಂಗ್ರಹದಲ್ಲಿ ಹೇಳಿರುವಂತೆ ಕಂಚಿನ ನಾದ ಬರುವ ಪುಂಶಿಲೆಯಿಂದ ಮೂರ್ತಿಗಳನ್ನು ನಿರ್ಮಿಸಿ ಸ್ತ್ರೀಶಿಲೆಗಳನ್ನು ಪೀಠಕ್ಕೂ ನಪುಂಸಕ ಶಿಲೆಗಳನ್ನು ಹಾಸುವುದಕ್ಕೂ ಉಪಯೋಗಿಸಲಾಗಿದೆ. ಮಾನಸಾರದಲ್ಲಿ ಹೇಳಿರುವ ರೀತಿ ಪ್ರತಿಮೆಗಳ ಲಲಾಟ, ನಾಸಿಕಾ ಮುಂತಾದವುಗಳನ್ನು ಆಯಾ ಪ್ರಮಾಣಗಳನ್ನನುಸರಿಸಿ ಬಿಡಿಸಿದ್ದಾರೆ.

ಆಲಯನಿರ್ಮಾಣವನ್ನು ವಾಸ್ತುಶಿಲ್ಪದ ರೀತಿ ನಿರ್ಮಿಸಲಾಗಿದೆ.

ಹೊಯ್ಸಳರ ವಾಸ್ತುಶಿಲ್ಪದಲ್ಲಿ ದಶಾವತಾರದಲ್ಲಿ ಶ್ರೀ ಕೃಷ್ಣನ ಜಾಗದಲ್ಲಿ ಬಲರಾಮನನ್ನು ಮಾಡಿದ್ದಾರೆ. ಶ್ರೀಕೃಷ್ಣನು ಪೂರ್ಣ ಅವತಾರಪುರುಷನೆಂದು ಅವರ ಭಾವನೆ.

ಪ್ರಧಾನ ದೇವಸ್ಥಾನವನ್ನು ನಕ್ಷತ್ರಾಕಾರದ ನಾಲ್ಕೂವರೆ ಅಡಿ ಎತ್ತರದ ಭಿತ್ತಿ (ಜಗಲಿ) ಯ ಮೇಲೆ ಕಟ್ಟಿದ್ದಾರೆ. ಅದನ್ನು ಶ್ರೀಚಕ್ರವೆಂಬುದಾಗಿ ಕರೆಯುತ್ತಾರೆ. ಶುಭಕಾರ್ಯಗಳನ್ನು ನಡೆಸುವಾಗ ನಾಂದೀಪೂಜೆಯನ್ನಾಚರಿಸುವಂತೆ ಈ ದೇವಾಲಯವನ್ನು ಕಟ್ಟುವಾಗ ಶ್ರೀಚಕ್ರದ ಸುತ್ತಲೂ ಸಪ್ತ ಮಾತೃಕೆಗಳ ಗುಡಿಗಳನ್ನು ಕಟ್ಟಿದ್ದಾರೆ.



ನಾಟ್ಯ ಮೋಹಿನಿ

ಶ್ರೀ ಚಕ್ರವೇ ಆದಿ ಕೂರ್ಮವೆಂದೂ, ಅದರ ಮೇಲೆ ಆನೆಗಳಸಾಲು ಅಷ್ಟ ದಿಗ್ಗಜಗಳೆಂದೂ, ಅನಂತರ ಲತೆಗಳು, ಪಕ್ಷಿಗಳು, ಪ್ರಾಣಿಗಳು, ಮನುಷ್ಯರು ಯಕ್ಷರು ದೇವತೆಗಳು, ಇವುಗಳು ಸೃಷ್ಟಿಯ ಸರಣಿಯನ್ನನುಸರಿಸಿರುತ್ತವೆ. ಕೆಳಗಿನ ಶ್ರೀ ಚಕ್ರದ ಮೂಲೆಗಳಿಗೂ ಮೇಲಿನ ಛಾವಣಿ ಮೂಲೆಗಳಿಗೂ, ಸವಾಲಿಗೆ ಜವಾಬಿನಂತಿದ್ದು ಅಲ್ಲಿರುವ ಮದನಿಕೆಗಳನ್ನು ನಕ್ಷತ್ರಗಳಿಗೂ ಮೇಲ್ಛಾವಣಿಯನ್ನು ಚಂದ್ರಮಂಡಲಕ್ಕೂ ಹೋಲಿಸಿದೆ.

## ಹೊಯ್ಸಳರೂ, ಬೇಲೂರು ದೇವಾಲಯವೂ

ಹೊಯ್ಸಳರು ಜೈನಮತಕ್ಕೆ ಸೇರಿದವರು. ಇಲ್ಲಿಗೆ ಸುಮಾರು ಹದಿನೆಂಟು ಮೈಲಿ ದೂರವಿರುವ ಮೂಡಿಗೆರೆ ತಾಲ್ಲೂಕಿನ ಅಂಗಡಿ ಎಂಬ ಗ್ರಾಮವೇ ಸಳನ

ಜನ್ಮಸ್ಥಳ ಈತನು ಇಲ್ಲೇ ತನ್ನ ಗುರುವಾದ ಸುದತ್ತ ಎಂಬುವರ ಆಜ್ಞೆಯಂತೆ



ಸಳನು ಹುಲಿಯನ್ನು ಕೊಲ್ಲುತ್ತಿರುವುದು

ಹುಲಿಯನ್ನು ಕೊಂದಿದ್ದು. ಅಲ್ಲಿ ಹಾಲಿ ಜೈನಮತದವರು ವಾಸವಾಗಿದ್ದಾರೆ ಅವರು ಪೂಜಿಸುವುದು ಇಲ್ಲಿನ ವಾಸಂತಿಕಾದೇವಿ ಎಂಬ ವೈಷ್ಣವೀ ಶಕ್ತಿ ದೇವತೆ ಸಳನ ನಾಲ್ಕನೇ ತಲೆಯವರೇ ವಿಷ್ಣುವರ್ಧನ. ಇವನ ತಂದೆ ವಿನಯಾದಿತ್ಯನ ಕಾಲದಲ್ಲೇ ಬೇಲೂರು ರಾಜಧಾನಿಯಾಗಿತ್ತು. ಇವರು ಮೊದಲು ಚಾಲುಕ್ಯರ ಸಾಮಂತರಾಗಿದ್ದು ವಿಷ್ಣುವರ್ಧನನ ಕಾಲದಲ್ಲಿ ಸ್ವತಂತ್ರರಾದರ . ಈ ದೊಡ್ಡ ರಾಜ್ಯವು ಚೆನ್ನಾಗಿ ಕೀರ್ತಿಗಳಿಸಿದ್ದು 13 ನೇ ಶತಮಾನದ ಮಧ್ಯಭಾಗದಲ್ಲಿ ಹೀನಸ್ಥಿತಿಗೆ ಬಂದು ಆಗ ವಿಜಯನಗರದ ರಾಜರ ಮೇಲ್ವಿಚಾರಣೆಗೊಳಪಟ್ಟು ವಿಜಯನಗರವು ಪೂರಾ ನಾಶವಾದಮೇಲೆ ಅರವೀಡು ಮನೆತನದ ಏಳನೇ ಶ್ರೀರಂಗರಾಜನ ಕಾಲದಲ್ಲಿ ಸುಮಾರು ಎಪ್ಪತ್ತು ವರ್ಷಗಳು ಇತ್ತು. ಆವಾಗ ಜೀರ್ಣೋದ್ಧಾರದ ಕೆಲಸಗಳು, ರಾಮದೇವರ ದೇವಸ್ಥಾನ, ಅಮ್ಮನವರ ದೇವಸ್ಥಾನ, ವಿಜಯನಗರ ಮಂಟಪ ಇವುಗಳೆಲ್ಲವೂ ಅಲ್ಲದೆ ದೊಡ್ಡದೊಂದು ರಥ ನಿರ್ಮಾಣವೂ ಕೂಡ ಆಗಿತ್ತು.

ಸುಮಾರು 12ನೇ ಶತಮಾನದಲ್ಲಿ ವಿದೇಶೀಯರು ಎರಡು ಸಾವಿರ ಮಣ ದಷ್ಟು ಚಿನ್ನವನ್ನು ಇಲ್ಲಿಂದ ದೋಚಿಕೊಂಡು ಹೋಗಿರುವುದಾಗಿ ಆ ಕಾಲದಲ್ಲಿ ವಿಜಯನಗರಕ್ಕೆ ಹೊರಟು ಮಾರ್ಗಮಧ್ಯೇನ ಇಲ್ಲಿಗೆ ಬಂದಿದ್ದ ಪರ್ಷಿಯಾ ದೇಶದ ರಾಯಭಾರಿ ಅಬ್ದುಲ್ ರಜಾಕ್ ಎಂಬುವರು ಬರೆದಿರುವ ಡೈರಿಯಿಂದ ತಿಳಿದು ಬರುತ್ತದೆ. ಅದಾದನಂತರ ಕಳ್ಳಕಾಕರ ಭಯದಿಂದ ದೊಡ್ಡ ದೇವಸ್ಥಾನಕ್ಕೆ ಜಾಲಂಧ್ರದ ಕಿಟಕಿಗಳು ವಿಷ್ಣುವರ್ಧನನ ಮೊಮ್ಮಗನ ಕಾಲದಲ್ಲಿ ಇಡಲ್ಪಟ್ಟವೆ ಅಲ್ಲದೆ ಮಹಾದ್ವಾರದ ಮೇಲಿನ ಗೋಪುರ ಕೂಡ ಒಂದನೇ ಅಂತಸ್ತಿನ ಬಳಿ ಬಹಮನೀ ರಾಜ್ಯದ ಕಲ್ಬುರ್ಗಿ ಗಂಗಾಸಾಲಾರ್, ಷಂಶುದ್ದೀನ್ ಷಾ ಎಂಬುವ ರಿಂದ ನಾಶಮಾಡಲ್ಪಟ್ಟಿದ್ದು , ವಿಜಯನಗರದ ಕೃಷ್ಣದೇವರಾಯರ ಮುತ್ತಜ್ಜ ಹರಿಹರ ಮಹಾರಾಜರ ದಂಡಾಧಿಪತಿ ಸಾಲುವ ಗುಂಡ ಎಂಬುವರು 13 ನೇ ಶತಮಾನದಲ್ಲಿ ಅವುಗಳಿಗೆ ಒಂದು ರೂಪುಕೊಟ್ಟು ಸರಿ ಪಡಿಸಿದ್ದಾರೆ



ವೀಣಾ ಪಾಣಿ

ವೆಂಕಟಾದ್ರಿ ನಾಯಕರ ಕಾಲದಲ್ಲೂ ಹೈದರಾಲಿಯ ವರ ಆಳ್ವಿಕೆಯಲ್ಲೂ ದೇವರಿಗೆ ಮತ್ತು ದೇವಸ್ಥಾನಕ್ಕೆ ಒಳ್ಳೆ ಕೆಲಸ ನಡೆದಿರುವ ನಿದರ್ಶನ ವಿದೆ. ದೊಡ್ಡ ಕೃಷ್ಣರಾಜ ಒಡೆಯರವರಕಾಲದಲ್ಲಿಯೂ ಬಹಳಷ್ಟು ಸಹಾಯ ಮಾಡಿ ದ್ದಾರೆ. ನಾವು ಕಂಡಂತೆ ನಮ್ಮ ದೇಶವನ್ನಾಳಿದ ಕೀರ್ತಿಶೇಷರಾದ ನಾಲ್ಮಡಿ

ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರ ಆಳ್ವಿಕೆಯ ಕಾಲದಲ್ಲಿ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್‌ರವರಿಗೆ ಸಲಹೆ ಕೊಟ್ಟದ್ದರ ಮೇರೆ ಅವರೂ ಬಹಳ ಭಕ್ತಿ ವಿಶ್ವಾಸಗಳಿಂದ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿ ಜೀರ್ಣೋದ್ಧಾರ ಕೆಲಸಗಳನ್ನು ನಡೆಸಿದ್ದಾರೆ.

ಅನಂತರವೂ ಈಗ ವಿಶಾಲ ಮೈಸೂರು ರಾಜ್ಯ ಹಾಗೂ ಇಡೀ ಕರ್ನಾಟಕಕ್ಕೇ ರಾಜ್ಯಪಾಲರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ರವರು ತಮ್ಮ ಆಳ್ವಿಕೆಯ ಕಾಲದಲ್ಲಿ 1940 ರಲ್ಲಿ ಬೇಲೂರು ದೇವಸ್ಥಾನದ ಹೊಯ್ಸಳ ವಿಷ್ಣುವರ್ಧನರ ಸಂಕ್ಷಿಪ್ತ ಚರಿತ್ರೆಗಳನ್ನೊಳಗೊಂಡ ಶಾಸನವನ್ನೂ ಮತ್ತು ಕೀರ್ತಿಶೇಷರಾದ ತಮ್ಮ ದೊಡ್ಡಪ್ಪಂದಿರು ಶ್ರೀಮನ್ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರ ಮತ್ತು ವಿಷ್ಣುವರ್ಧನರ ಪಂಚಲೋಹದ ಭಕ್ತವಿಗ್ರಹಗಳನ್ನು ಪ್ರತಿಷ್ಠಿಸಿ ದೇವರಿಗೆ ಭಾರಿ ಬೆಲೆಬಾಳುವ ಆಭರಣ ವಸ್ತ್ರಾದಿಗಳನ್ನು ಕೊಟ್ಟು ಉತ್ಸವಾದಿಗಳನ್ನು ವಿಜೃಂಭಣೆಯಿಂದ ನೆರವೇರಿಸಿದರು. ಒಟ್ಟು ದೇವಾಲಯದ ನಿರ್ಮಾಣದ ಕೆಲಸಗಳು 103 ವರ್ಷಗಳ ಕಾಲದವರೆಗೆ ಅಜ್ಜನ ಕಾಲದಲ್ಲಿ ಪ್ರಾರಂಭವಾದದ್ದು ಮೊಮ್ಮಗನ ಕಾಲದಲ್ಲಿ ಮುಗಿದುದಾಗಿ ತಿಳಿದುಬರುತ್ತದೆ.

ವಿಷ್ಣುವರ್ಧನನು ಸಕಲ ವೇದಶಾಸ್ತ್ರಪಾರಂಗತನಾಗಿದ್ದನಲ್ಲದೆ ಇವನಿಗೆ "ಭರತಾಚಾರ್ಯ" ಎಂಬ ಬಿರುದೂ ಇದ್ದಿತು. ಆತನ ಪಟ್ಟಮಹಿಷಿಯಾದ ಶಾಂತಲಾದೇವಿಯೂ ಕೂಡ ಭರತನಾಟ್ಯಪ್ರವೀಣೆಯಾಗಿದ್ದಳು. ಮೂಲ ದೇವರನ್ನು ಪ್ರತಿಷ್ಠಿಸಿದನಂತರ ರಾಜನು ದೇವಸ್ಥಾನದಲ್ಲಿ ದರ್ಬಾರನ್ನು ನಡೆಸಿದಂತೆಯೂ ಶಾಂತಲಾದೇವಿಯರು ಮಹಾಜನಗಳ ಅಪೇಕ್ಷೆಯಂತೆ ದೇವರ ಸಮ್ಮುಖದಲ್ಲಿ ಭರತನಾಟ್ಯ ಮಾಡಿದಂತೆಯೂ ಸಭಿಕರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಅವರ ವಿಜ್ಞಾಪನೆಯಂತೆ ರಾಜನು ಶಾಂತಲಾದೇವಿಯರಿಗೆ "ನಾಟ್ಯ ಸರಸ್ವತಿ" "ಸಕಲ ಸವತಿಯ ರಕ್ಷಾಮಣಿ" ಮತ್ತು "ಸಂಗೀತ ಚಾರಿತ್ರ್ಯ ವಿಶಾರದೆ" ಎಂಬ ಬಿರುದುಗಳನ್ನು ದಯಪಾಲಿಸಿ ಶಾಂತಿಗ್ರಾಮವನ್ನು ಬಹುಮಾನವಾಗಿ ದಯಪಾಲಿಸಿದ್ದಾನೆ. ಅಲ್ಲಿ ತನ್ನ ಎರಡನೆ ಬಿರುದಿಗೆ

ಅನ್ವರ್ಥವೋ ಎಂಬಂತೆ ಒಂದು ವಿಷ್ಣು ದೇವಾಲಯ, ಒಂದು ಈಶ್ವರದೇವಾಲಯ ಮತ್ತು ಒಂದು ಜೈನ ದೇವಾಲಯವನ್ನೂ ಕಟ್ಟಿಸಿದ್ದಾನೆ. ಈತನಿಗೆ "ಧರ್ಮೇಶ್ವರ ವರಪ್ರಸಾದೋದ್ಭವ" ಎಂದೂ, "ಸವತೀ ಗಂಧವಾರಣ ಹಸ್ತಿಯುಂ" ಎಂದೂ ಬಿರುದುಗಳಿದ್ದವು.

## ಮೂಲ ದೇವಸ್ಥಾನ—ಹೊರಭಾಗದ ವರ್ಣನೆ

ಶ್ರೀ ಚಕ್ರದ ಮೇಲೆ ದೇವಸ್ಥಾನಕ್ಕೆ ಹೋಗುವ ಎಡ ಬಲ ಭಾಗಗಳಲ್ಲಿ ಇರುವ ಹೊಯ್ಸಳರ ಚಿತ್ರಗಳಿವೆ. ಅದರಲ್ಲಿ ಸಳನು ಹುಲಿಯನ್ನು ಖಡ್ಗದಿಂದ ಹೊಡೆದಿದ್ದಾನೆ. ಅನಂತರ ಪ್ರದಕ್ಷಿಣಾಕಾರವಾಗಿ ಹೊರಟರೆ ಮೇಲೆ ಕಿಟಕಿ ಸಾಲಿನಲ್ಲಿ ಪರಿವಾರಸಮೇತನಾದ ವಿಷ್ಣುವರ್ಧನನ ದರ್ಬಾರು ಬಿಡಿಸಲ್ಪಟ್ಟಿದೆ.



ಶಾಂತಲಾ ನೃತ್ಯ

ನಂತರ ಭಾರತದ ಕಥೆಗಳು, ಪಾಂಡವರು ಮತ್ತು ಕೌರವರು ಪಗಡೆಯಾಡುವುದು, ಭೀಮನು ಮರವನ್ನಲ್ಲಾಡಿಸಿ ಕೌರವರನ್ನು ಬೀಳಿಸುವುದು, ಭೀಮನು ತಂದ ಭಿಕ್ಷಾನ್ನವನ್ನು ತಾಯಿಗೆ ಕೊಟ್ಟು ಅದರಿಂದ ಅರ್ಧ ಭಾಗವನ್ನು ಪಡೆಯುವುದು, ವಿರಾಟ ರಾಜನ ದರ್ಬಾರು, ಶಮೀ ವೃಕ್ಷದಿಂದ ಆಯುಧಗಳನ್ನು ಉತ್ತರನೂ ಅರ್ಜುನನೂ ತೆಗೆದುಕೊಳ್ಳುತ್ತಲಿರುವುದು, ಉತ್ತರಗೋಗ್ರಹಣ ಕಾಳಗ

ಅರ್ಜುನನ ಸಮ್ಮೋಹನಾಸ್ತ್ರ, ಅರ್ಜುನನು ವಿರಾಟನಗರಕ್ಕೆ ಗೋವುಗಳನ್ನು ವಾಪಸು ತರುತ್ತಿರುವುದು, ವಿರಾಟ ರಾಜನಿಗೆ ಉತ್ತರನು ಯುದ್ಧದ ನಿಜಸ್ಥಿತಿಯನ್ನು ಹೇಳುತ್ತಿರುವುದು, ಭೀಮನು ಕೀಚಕನನ್ನು ವಧೆಮಾಡಿ ಮಾಂಸದ ಮುದ್ದೆಯನ್ನಾಗಿ ಮಾಡಿರುವುದು, ಶಯನಾಸನದಲ್ಲಿದ್ದ ಕೃಷ್ಣನ ತಲೆಯ ಕಡೆ ದುರ್ಯೋಧನನೂ ಕಾಲಕಡೆ ಅರ್ಜುನನೂ ನಿಂತು ಕೃಷ್ಣನ ಸಹಾಯವನ್ನು ಕೇಳುತ್ತಿರುವುದು, ಧರ್ಮರಾಜರ ಅಂತರಂಗಸಭೆ, ಭೀಮನು ಕೃಷ್ಣನಿಗೆ ರಾಜಿ ಪ್ರಸ್ತಾಪ ಬೇಡ ಯುದ್ಧವೇ ನಡೆಯಬೇಕೆಂದು ಹೇಳುತ್ತಿರುವುದು, ಯದ್ಧಕ್ಕೆ ಮೊದಲು ಭೀಮನು ಗಣಪತಿಪೂಜೆ ಮಾಡುತ್ತಿರುವುದು, ಕೃಷ್ಣನು ಕುಂತಿಯ ಆತಿಥ್ಯ ಸ್ವೀಕರಿಸಿ ಕರ್ಣನಿಂದ ಪಾಂಡವರಿಗೆ ತೊಂದರೆಯಾಗದಂತೆ ವಚನ ಪಡೆ ಎಂದಿದ್ದು, ಕೃಷ್ಣನು ವಿದುರನ ಮನೆಗೆ ಬಂದಿದ್ದು, ದುರ್ಯೋಧನನು ಕೃಷ್ಣನಿಗೆ ಅವಮಾನ ಮಾಡಹೊರಟಾಗ ಕೃಷ್ಣನು ಭೂಮಿಯನ್ನು ಉಂಗುಷ್ಟದಿಂದ ಒತ್ತಲಾಗಿ ಪೀಠಸಹಿತ ದುರ್ಯೋಧನನು ಕೃಷ್ಣನ ಪಾದಗಳಮೇಲೆ ಬಿದ್ದಿರುವುದು, ಅಲ್ಲಿ ದೇವತೆಗಳ ಪುಷ್ಪವೃಷ್ಟಿ, ಆಚಾರ್ಯರು ಮೂವರು ಶಲ್ಯ, ದುರ್ಯೋಧನ, ಕರ್ಣಾದಿಗಳು, ದೃಷ್ಟದ್ಯುಮ್ನ ಮತ್ತು ಭೀಷ್ಮರ ಕಾಳಗ, ಭೀಷ್ಮರು ಶರಪಂಜರದ ಮೇಲೆ ಮಲಗಿರುವುದು, ಭೀಮನು ಭಗದತ್ತನ ಆನೆಯನ್ನು ಕೊಲ್ಲುವುದು, ರುದ್ರಾಂಶವಿದ್ದ ಆನೆ ಭೀಮನನ್ನು ಹಿಡಿದಿರುವುದು, ಕೃಷ್ಣನು ಅರ್ಜುನನಿಗೆ ಈಗ ಆನೆಯನ್ನು ಹೊಡೆ ರುದ್ರಾಂಶ ಕಳೆದಿದೆ ಎಂದು ಹೇಳಿದ್ದು, ಸಮಸಪ್ತಕರುಗಳ ಯುದ್ಧ.

ಅಲ್ಲಿಂದ ಬೇರೆ ಅಂಕಣದಲ್ಲಿ ರಾಮಾಯಣ ಕಥಾಭಾಗ ಕೊಡಲ್ಪಟ್ಟಿದೆ. ಮಾರೀಚನ ಸಂಹಾರ, ಸೀತಾಪಹರಣ, ಜಟಾಯು ರಾವಣರ ಕಾಳಗ, ರಾಮ ಲಕ್ಷ್ಮಣರ ಪ್ರಲಾಪ, ಶಬರಿಯ ಆತಿಥ್ಯ ಸ್ವೀಕಾರ, ಸುಗ್ರೀವಾಂಜನೇಯರ ಸಖ್ಯ, ಸೀತಾನ್ವೇಷಣಕ್ಕಾಗಿ ಕಪಿಗಳು ದಿಕ್ಕು ದಿಕ್ಕಿಗೆ ಸಂಚಾರ ಹೊರಟಿರುವುದು. ಇಲ್ಲಿಂದ ಮುಂದೆ ಮೇಲ್ಗಡೆ ಕಾಳಿಕಾದೇವಿ, ಚಂದ್ರಹಾಸ, ಚಂದ್ರಹಾಸನು ಧರಿಸಿರುವುದು ಓರ್ಪ ಕಾಲರಿನ ಓವರ್‌ಕೋಟು, ಮುಂದಕ್ಕೆ ಸಮಗ್ರವಾಗಿ ಪ್ರಹ್ಲಾದ ಚರಿತ್ರೆ, ಮುಂದೆ ಲಕ್ಷ್ಮೀನಾರಾಯಣ, ಪಟಪತ

ಶಾಯಿ, ಹರಿಹರ, ಜಲಂಧರಾಸುರನ ಸಂಹಾರ, ದುರ್ಗೆ, ಗಣಪತಿ, ಪರಶುರಾಮ, ವಾಮನ, ರಾವಣನು ಕೈಲಾಸಪರ್ವತವನ್ನೆತ್ತುತ್ತಿರುವುದು, ಇದರಲ್ಲಿ ಬೆಟ್ಟದಮೇಲಿರಬೇಕಾದ ಸಮಸ್ತವನ್ನೂ ನೋಡಬಹುದಾಗಿದೆ. ದಕ್ಷಬ್ರಹ್ಮ, ಹಲಾಯುಧ, ಗದಾಧರ, ಚತುರ್ಮುಖಬ್ರಹ್ಮ, ಗಜಾಸುರ ಮರ್ಧನ, ನಾಗಕನ್ನಿಕೆ, ಪುರುಷ, ವೀರಭದ್ರ, ಸಪ್ತಾಶ್ವಗಳ ಸಮೇತ ಸೂರ್ಯನಾರಾಯಣ, ಚಂದ್ರ, ಸರಸ್ವತಿ, ನಟರಾಜ, ವರಾಹಮೂರ್ತಿ, ಅಂಜನಾದೇವಿ, ಆಂಜನೇಯ, ರತಿ-ಮನ್ಮಥರು, ಅರ್ಜುನ, ಅರ್ಧನಾರೀಶ್ವರ, ರಂಗನಾಥಸ್ವಾಮಿ, ಗಂಡಬೇರುಂಡಪಕ್ಷಿಯು ಅನೇಕ ಪ್ರಾಣಿಗಳನ್ನು ಎತ್ತಿಕೊಂಡು ಹೋಗುತ್ತಿರುವುದು. ಭಾಗವತ ಕಥಾ—ಶ್ರೀಕೃಷ್ಣನು ಕಂಸನನ್ನು ಕಾಲನ್ನು ಹಿಡಿದೆಳೆದುಕೊಂಡುಹಾಕಿರುವುದು, ಚಾಣೂರ ಮುಷ್ಟಿಕರೆಂಬ ಮಲ್ಲರೊಡನೆ ಯುದ್ಧಮಾಡಿ ಅವರನ್ನೂ ಕುವಲಯಾನಂದವೆಂಬ ಆನೆಯೊಡನೆ ಯುದ್ಧಮಾಡಿ ಅವುಗಳನ್ನು ಕೊಂದಿದ್ದು, ನಂತರ ಕೊಳಲನ್ನೂದುತ್ತಾ ನಿಲ್ಲಲು ಗೋವುಗಳೂ ಗೋಪಾಂಗನೆಯರೂ ಆಲಿಸಿ ಪರವಶರಾಗಿ ನಿಂತಿರುವುದು, ಸಮುದ್ರ ಮಥನ, ಬಾಗಿಲಿನ ಎಡ ಭಾಗದಲ್ಲಿ ಮೃಗ ವಿಜಯ (ನಾರಸಿಂಹ) ಇದೆ.



ಭಸ್ಮ ಮೋಹಿನಿ

ಮದನಿಕೆಗಳಲ್ಲಿ ಶೃಂಗಾರಾದಿ ನವರಸಗಳಲ್ಲಿ ಕೆಲವು ಕೆಲವು ರಸಗಳನ್ನು ಕೆಲವು ಕೆಲವು ವಿಗ್ರಹಗಳಲ್ಲಿ ಪ್ರತಿಬಿಂಬಿಸುವಂತೆ ಮಾಡಿದ್ದಾರೆ ಇವುಗಳಿಗಿಂತ ಸುಂದರವಾದ

ವಿಗ್ರಹಗಳು ಬೇರೊಂದಿಲ್ಲ. ಬಹುಭಾಗ ವಿಗ್ರಹಗಳ ಪೀಠದಮೇಲೆ ಶಿಲ್ಪಿಯ ಹೆಸರಿದೆ.

ದೊಡ್ಡ ದೇವಸ್ಥಾನದ ಒಳಗೆ ನವರಂಗದಲ್ಲಿ ಎಡಪಾರ್ಶ್ವದ 1 ನೇ ಕಂಬದ ಮೇಲಿರುವ ಮದನಿಕೆಯ ಕೈಗೂ ಕೈಬೆರಳಿಗೂ ನಡುವೆ ಜಾಗವನ್ನು ಬಿಡಿಸಿದ್ದು ಬಳೆಗಳು ತಿರುಗುತ್ತವೆ. ಎಡತೋಳಿನ ಮೇಲೆ ಗಿಳಿಯೊಂದು ಕುಳಿತುಕೊಂಡು ಮದನಿಕೆಯ ಕುತ್ತಿಗೆಯಲ್ಲಿನ ಹಾರದ ಮುತ್ತನ್ನು ಕಚ್ಚಿಕೊಂಡಿದೆ. ಎರಡನೆ ಕಂಬದ ಮೇಲಿನ ವಿಗ್ರಹವು ಶಾಂತಲಾದೇವಿಯ ಭರತನಾಟ್ಯಸ್ವರೂಪವನ್ನು ತೋರಿಸುತ್ತದೆ ಬೈತಲೆಯ ಮುಂದಲ ಗೆಜ್ಜೆ ಅಲುಗಾಡುತ್ತದೆ. ಕಲ್ಲಿನಿಂದಲೆ ಕೊರೆದಿರುವ ಸಾಹಸ ಆಶ್ಚರ್ಯಕರವಾದುದು ಮೂರನೇ ಕಂಬದ ಮೇಲಿರುವ ವಿಗ್ರಹವು ದೇವನೃತ್ಯ. ಕಿರೀಟವನ್ನು ಧರಿಸಿಕೊಂಡು ನೃತ್ಯಮಾಡುವುದು ದೇವತೆಗಳಿಗೆ ಮಾತ್ರ ಮೀಸಲಾದ್ದು. ನಾಲ್ಕನೇ ಕಂಬದ ಮೇಲಿನ ವಿಗ್ರಹವು ಇದರಮೇಲಿನ ಪ್ರಭಾವಳಿ ಜೋಡಿಯಾಗಿದ್ದು ಒಂದರಿಂದೊಂದಕ್ಕೆ ಅರ್ಧ ಅಂಗುಲ ಬಿಡುವಿದೆ. ಈ ಪ್ರಭಾವಳಿಯಲ್ಲಿ ಅನೇಕ ಪಕ್ಷಿಗಳೂ, ಪ್ರಾಣಿಗಳೂ ಇವೆ. ತಲೆ ಕೂದಲಿನ ತುದಿಯಲ್ಲಿ ನೀರಿನ ಬಿಂದುಗಳು ಬೀಳುವಂತಿವೆ ಇವು ನಾಲ್ಕೂ ಅತಿ ಸುಂದರವಾದವುಗಳು ಇವು ಶಾಂತಲಾದೇವಿಯ ತೌರೂರಾದ ಶಿಕಾರಿಪುರ ತಾ॥ ಬಾಳಗಾವಿ (ಬಲ್ಲಿ) ಗ್ರಾಮದ ಶಿಲ್ಪಿಗಳಿಂದ ಮಾಡಲ್ಪಟ್ಟವೆ.

ಹೊರಗೆ ಪ್ರದಕ್ಷಿಣಾಕಾರವಾಗಿ ಹೊರಟರೆ ಕಾಣಬಹುದಾದ ಮದನಿಕೆಗಳು

1 ಕನ್ನಡಿಯನ್ನು ನೋಡಿಕೊಂಡು ಹಿಗ್ಗುವುದು. ಇದರ ಬಲಗಡೆಗೆ ಒಂದು ಚಿಕ್ಕ ಬೊಂಬೆ ಕೋತಿಮರಿಯನ್ನು ಎತ್ತಿಕೊಂಡು ದ್ರಾಕ್ಷಿಗೊಂಚಲಿಂದ ಹಣ್ಣು ಚೀಪಲು ಕೊಡುತ್ತಾ ಇದೆ.

2 ಗಿಣಿಯನ್ನು ಸಂಭೋದಿಸಿ ಅದರೊಡನೆ ಮಾತನಾಡುತ್ತಿರುವುದು.

3 ವಸಂತ ನೃತ್ಯ 4 ಕೈಲಿ ತಾಂಬೂಲ ಹಿಡಿದಿರುವುದು.

5 ಕೋತಿಯೊಂದು ಬಟ್ಟೆಯನ್ನೆಳೆಯುವಾಗ ಹೆದರಿ ಹೊಡೆಯುವ ಸಲುವಾಗಿ ಮರದ ಕೊನೆಯನ್ನು ಮುರಿದುಕೊಂಡಿರುವುದು.

6 ಗುರಿಯನ್ನು ಕಟ್ಟಿ ಕಲ್ಲುಹೊಡೆಯುವುದು

7 ಸ್ನಾನವಾದನಂತರ ತಲೆ ಕೂದಲನ್ನು ಹಿಂಡಿಕೊಳ್ಳುವುದು.

8 ಶರೀರವನ್ನು ತ್ರಿಭಂಗಿಯಾಗಿ ಮಾಡಿರುವುದು.

9 ಅರ್ಧ ಮೋಹಿನಿ ಇದರ ಪ್ರಭಾವಳಿಯಲ್ಲೀ ಹಲಸಿನಹಣ್ಣಿನಮೇಲೆ ನೊಣ ಮತ್ತು ಹಲ್ಲಿಯನ್ನು ಸಹ ಕಾಣಬಹುದು.

10 ಸಿತಾರ್ ಹಿಡಿದಿರುವುದು.



ವಿಷ ಕನ್ಯೆ

11 ಮುಂಗುರುಳನ್ನು ಸರಿಪಡಿಸುತ್ತಿರುವುದು.

12 ಕಿರಾತ ಸ್ತ್ರೀಯು ಸೊಪ್ಪಿನ ಉಡಿಗೆಯಲ್ಲಿ

13 ಇಲ್ಲಿ ಬೇಟೆಗಾತಿ ಮುಳ್ಳನ್ನು ತೆಗೆಸಿಕೊಳ್ಳುವ ಚಿತ್ರ ಮುಖಭಾವ ನೋಡುವಂತಹದು.

14 ಮೋಹಿನಿ ಚಿತ್ರ

15 ಸೀರೆಯನ್ನುಡಲು ತೆಗೆದುಕೊಂಡಾಗ ಚೇಳು ಪೀಠದಮೇಲೆ ಬಿದ್ದು ಭಯ ಚಕಿತಳಾಗಿರುವುದು.

16 ಪಶಂಗನೃತ್ಯ ಶಿಲ್ಪ ರುವಾರಿ ಕೆಂಚಮಲ್ಲಿಯಣ್ಣನ ಹಸ್ತ ಕುಶಲತೆ

17 ಕಣಿ ಹೇಳುವವಳು.

18 ಅಲಂಕರಿಸಿಕೊಂಡು ನಿಂತಿರುವುದು. ಶಿಲ್ಪಮಚ್ಚರಿಪಬಿರುದರು ವಾರಿಗಿರಿ ಪಜ್ರದಂಡ ರುವಾರಿ ಮಾಯಣ್ಣ.

19 ರಾಣಿಯು ಆಲದ ಬಿಳಲನ್ನು ಹಿಡಿದುಕೊಂಡು ಉಯ್ಯಾಲೆ ತೂಗಿಕೊಳ್ಳುತ್ತಿರುವ ಭಂಗಿ.

20 ಪುರುಷವೇಷಧಾರಿ ಸ್ತ್ರೀ. ಇನ್ನೂ ಅನೇಕವಿವೆ.

ದೊಡ್ಡ ದೇವಸ್ಥಾನದ ಒಳಗಿರುವ ಪ್ರತಿಯೊಂದು ಕಂಬವೂ ಬೇರೆ ಬೇರೆ. ನವರಂಗದಲ್ಲಿರುವ ನಾಲ್ಕೂ ಒಂದೇ ನಮೂನೆಯಾಗಿ ತೋರಿದರೂ ಚಿತ್ರಗಳು ಬೇರೆಬೇರೆಯಾಗಿವೆ. ಉಳಿದ ಕಂಬಗಳಲ್ಲಿ ಅತಿ ಮುಖ್ಯವಾದವು ತುಂಬಾ ಪ್ರಮಾಣದ ಚಿತ್ರಗಳನ್ನು ಬಿಡಿಸಿರುವ ನರಸಿಂಹದೇವರ ಕಂಬ, ಅನೇಕ ತರಹೆಯ ನಾದ ಉಂಟಾಗುವ ಮೋಹಿನಿ ಕಂಬ. ಅನೇಕ ರಂಧ್ರಗಳಿಂದ ಕೂಡಿದ ಕಂಬ, ಮೋಟಾರ್ ಟೈರಿನಂತೆ ಸಿಂಬಿಯುಳ್ಳ ಕಂಬ ಮೇಲ್ಭಾವಣಿಯ ಒಳಭಾಗದ ಸೀಲಿಂಗ್ (ಮೆಚ್ಚಿಗೆ) ಪ್ರತಿ ಅಂಕಣದ್ದೂ ಬೇರೆ ಬೇರೆ ತರಹೆಯದ್ದಾಗಿವೆ.

ಅನೇಕರು ಕೇಳಿ ತಿಳಿದಿರುವ ಜಕಣಾಚಾರಿ, ಡಂಕಣಾಚಾರಿ ಎಂಬ ಶಿಲ್ಪಿಗಳ ಹೆಸರುಗಳು ಯಾವ ಲೇಖನದಲ್ಲೂ ಕಂಡುಬರುವುದಿಲ್ಲ ಆದರೆ ಜಕ್ಕಣ್ಣ ಎಂಬ ಸಾಮಾನ್ಯ ಶಿಲ್ಪಿಯ ಹೆಸರು ಮಾತ್ರ ಕಂಡುಬರುತ್ತದೆ. ದಕ್ಷಿಣ ಪ್ರದೇಶದ ಆಚಾರಿಗಳು ಮಾಡಿದ ಕೆಲಸದಿಂದಾಗಿ ದಕ್ಷಿಣಾಚಾರಿ ಎಂಬುದು ಡಕಣಾಚಾರಿ ಎಂಬುದಾಗಿ ಆಗಿರಬಹುದೆಂದು ಕೆಲವು ಮಂದಿ ಚರಿತ್ರಕಾರರ ಅಭಿಪ್ರಾಯವಾಗಿದೆ.

ವಿಗ್ರಹಗಳನ್ನು ಕೊರೆಯುವುದರಲ್ಲಿ ಶಿಲ್ಪಿಯು ಅತ್ಯಂತ ಸೂಕ್ಷ್ಮವಾದ ಕಲಾಕೌಶಲ್ಯವನ್ನು ತೋರಿಸಿದ್ದಾನೆ. ತಲೆಯ ಕೂದಲು, ಉಗುರು, ಕಣ್ಣು, ಮೂಗಿನ ಹೊಳ್ಳೆಯನ್ನೂ ಕೂಡ ಬಿಡಿಸಿದ್ದಾನೆ. ಆಧುನಿಕವಾದ ಹ್ಯಾಂಡಲ್ ಇರುವ ಕನ್ನಡಿ, ಸ್ಪ್ರಿಂಗ್ ಕಾರ್, ಓವರ್ ಕೋಟು, ಕಮ್ಮರ್‌ಬಂದ್, ಅಮೆರಿಕನ್ ಕೋಟು, ಬಾಲಕ್ಲಾವಾ ಟೋಪಿ, ನಟ್ಸ್, ಬೋಲ್ಟ್ಸ್, ವಾಷರ್ಸ್, Hanging Chain, Bell, Hair Dressing, ಕಪಿ ಸೈನ್ಯದ ಮುಂದಾಳುಗಳು ಬಾವುಟವನ್ನು ಹಿಡಿದಿರುವುದು, ಲೋಲಕ್, ಪವಿತ್ರ ಗ್ರಂಥಿ, ಹೈದರಾಬಾದಿನ ನಮೂನೆ ಉಡಿಗೆಗಳು, ಅಲ್ಲದೆ ಸಣ್ಣ ಪ್ರಮಾಣದಲ್ಲಿ ನೊಣ, ಜೇನುಹುಳು, ಹಲ್ಲಿ, ಚೇಳು, ಆಮೆ, ಬಸವ, ಆನೆ, ಜಿಂಕೆ, ಕಪಿ, ಘೇಂಡಾ ಮೃಗ, ಹಲಸಿನಹಣ್ಣು ಮುಂತಾದವನ್ನು ಮಾಡಿದ್ದಾನೆ.



ಕೇಶ ಶೃಂಗಾರ

ಇಷ್ಟು ಅದ್ಭುತವೂ, ವೈವಿಧ್ಯಪೂರಿತವೂ, ವಿಸ್ಮಯ ಕಾರಕವೂ ಆಗಿರುವ ಈ ದೇವ ಸ್ಥಾನವನ್ನು ಕಟ್ಟಿಪೂರೈಸಲು ಸುಮಾರು 103 ವರ್ಷಗಳಾ ಗಿರಬಹುದೆಂದು ತಿಳಿದುಬರು ತ್ತದೆ. ಇದನ್ನು ಕಟ್ಟಲು ಉಪಯೋಗಿಸಿರುವ ಕಲ್ಲು ಘಟ್ಟ ಬಳಪ ಒಂದೇ ತರಹೆ ಯದಾಗಿದೆ ಈ ತರಹದ ಕಲ್ಲು ಸುತ್ತಮುತ್ತಲು 100 ಮೈಲಿ ಫಾಸಲೆಯಲ್ಲಿ ಎಲ್ಲೂ ಕಾಣಬರುವುದಿಲ್ಲ. ಪ್ರಪಂಚ ವನ್ನೇ ಸುತ್ತಿರುವ ಅನೇಕ

ಮಹನೀಯರುಗಳೂ, ಕಲಾ ವಿಮರ್ಶಕರೂ ಈ ದೇವಸ್ಥಾನವನ್ನು ನೋಡಿ ಪೃಥ್ವಿಯಲ್ಲಿರುವ ಅತ್ಯಾಶ್ಚರ್ಯ ವಸ್ತುಗಳಲ್ಲಿ ಇದೊಂದನ್ನುಮಾತ್ರ ಏಕೆ ಸೇರಿಸಲಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಕೆಳಗಿನ ಪ್ರಾಕಾರದಲ್ಲಿ ಹಿಂದಿನ ಪಾಕಶಾಲೆ, ಪಣತ, ಯಾಗಶಾಲ, ನರಸಿಂಹ ದೇವರ ದೇವಸ್ಥಾನ ಇವುಗಳು ವೆಂಕಟಾದ್ರಿನಾಯಕರ ಕಾಲದಲ್ಲೂ, ಹಳೇ ಅಮ್ಮನವರ ದೇವಸ್ಥಾನ ವಿಜಯನಗರ ಮಂಟಪ ಇವು ವಿಜಯನಗರದವರ ಕಾಲದಲ್ಲೂ ಕಟ್ಟಿದ್ದಾಗಿ ತಿಳಿದಿದೆ.

## ಹೊಸ ಅಮ್ಮನವರ ದೇವಸ್ಥಾನ

ಇಲ್ಲಿರುವ ಲಕ್ಷ್ಮೀ ವಿಗ್ರಹ ವೀರಬಲ್ಲಾಳನ ಮಂತ್ರಿ ಬಿಟ್ಟಿಜೋವ ಎಂಬುವರು ಬಿಟ್ಟೇಶ್ವರನೆಂಬ ಶಿವಾಲಯದಿಂದ ಕಲ್ಲುಗಳನ್ನು ತರಿಸಿ ಪಾಳೆಯಗಾರರು ಕಟ್ಟಿಸಿದ್ದಾರೆ.

ಈ ದೊಡ್ಡ ದೇವಸ್ಥಾನವನ್ನು ಕಟ್ಟಿದಂದಿನಿಂದ ಹರಿಜನರ ಪ್ರವೇಶಕ್ಕೆ ಅವಕಾಶವಿದೆ.

## ದೇವಾಲಯವನ್ನು ವೀಕ್ಷಿಸಿದ ಪ್ರಸಿದ್ಧ ಪುರುಷರು

ಈ ದೇವಸ್ಥಾನಕ್ಕೆ ಹೆಚ್ಚು ಜೀರ್ಣೋದ್ಧಾರ ಕಾರ್ಯಗಳನ್ನು ಮಾಡಿಸಿ ಕೀರ್ತಿಪಡೆದವರು ಕೀರ್ತಿಶೇಷರಾದ ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರ್‌ರವರು ದಿ॥ ಸರ್ ಮಿರ್ಜಾ ಇಸ್ಮಾಯಿಲ್‌ರವರು ಮತ್ತು ಸರ್ ಎಂ. ವಿಶ್ವೇಶ್ವರಯ್ಯನವರು, ಅನೇಕ ಪಾಶ್ಚಿಮಾತ್ಯ ಮಹನೀಯರುಗಳು, ವೈಸ್‌ರಾಯ್‌ರವರು, ಇಂಡಿಯಾ ದೇಶದ ರಾಜ್ಯಾಧಿಕಾರಿಗಳು, ಮಹಾತ್ಮಾಜೀಯವರು. ಪಂಡಿತ ನೆಹರೂರವರು, ರಾಷ್ಟ್ರಾಧ್ಯಕ್ಷ ರಾಜೇಂದ್ರಪ್ರಸಾದ್‌ರವರು, ಡಾ॥ ಸರ್ ಎಸ್. ರಾಧಾಕೃಷ್ಣನ್‌ರವರು. ಆಚಾರ್ಯ ಕೃಪಲಾನಿಯವರು, ಜೆ. ಪ್ರಕಾಶ ನಾರಾಯಣ್‌ರವರು, ಚಕ್ರವರ್ತಿ ರಾಜಗೋಪಾಲಾಚಾರಿಯವರು, ಶ್ರೀಮಾನ್ ಆರ್. ಆರ್. ದಿವಾಕರ್‌ರವರು, ಈ ದೇವಸ್ಥಾನದ ಮದನಿಕೆಗಳ ಮೇಲೆ ಅನೇಕ ಉತ್ತಮವಾದ ಕೃತಿಗಳನ್ನು ರಚಿಸಿರುವ ಶ್ರೀಮಾನ್ ಡಿ. ವಿ. ಗುಂಡಪ್ಪನವರು,

ಜಸ್ಟಿಸ್ ರಾಷ್ಟ್ರಾಧ್ಯಕ್ಷರವರು, ಸರ್ ಎಸ್. ರಾಮಮೂರ್ತಿಯವರು, ಗೌರ್ನರ್ ಗಳು ಮಂತ್ರಿಗಳು ಇನ್ನೂ ಮುಂತಾದ ಮಹನೀಯರುಗಳೂ ಸಹ ಈ ದೇವಸ್ಥಾನವನ್ನು ನೋಡಿ ತಮ್ಮ ಅಪರಿಮಿತ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ.

ಇತ್ತೀಚೆಗೆ ಭಾರತ ಸರ್ಕಾರದ ಪ್ರಾಚ್ಯಸಂಶೋಧನಾ ಇಲಾಖೆಯವರು ಸುಂದರವಾದ ಈ ದೇವಸ್ಥಾನವನ್ನು "ರಾಷ್ಟ್ರೀಯ ಸ್ಮಾರಕ"ಎಂದು ಪರಿಗಣಿಸಿ ನೇರವಾಗಿ ತಮ್ಮ ರಕ್ಷಣೆಗೂ, ಮೇಲ್ವಿಚಾರಣೆಗೂ ಒಳಪಡಿಸಿಕೊಂಡು ಆ ಬಗ್ಯೆ ಸಿಬ್ಬಂದಿಯನ್ನು ನೇಮಿಸಿರುತ್ತಾರೆ. ಈ ದೇವಸ್ಥಾನದ ಕೀರ್ತಿಯು ದೇಶ ವಿದೇಶಗಳಲ್ಲಿ ಹರಡಿ ಇನ್ನೂ ಉಜ್ವಲ ಭವಿಷ್ಯ ಕಾದಿರುವಂತಿದೆ. ಪ್ರತಿದಿನವೂ ಈ ದೇವಸ್ಥಾನವನ್ನು ನೋಡಲು ಬರುವ ಪ್ರೇಕ್ಷಕರಿಗೆ ತಕ್ಕಷ್ಟು ಸೌಕರ್ಯವು ಇಲ್ಲದೆ ಈ ವಿಷಯದಲ್ಲಿ ಅನುಕೂಲ ಕಲ್ಪಿಸಲಾಗುತ್ತೆಂದು ನಿರೀಕ್ಷಿಸಲಾಗಿದೆ.



ಗಂಧರ್ವ ಕನ್ಯೆ

## ಸ್ಥಳ ಮಹಾತ್ಮೆ

ಸ್ಥಳಪುರಾಣದಲ್ಲಿ "ಭೂವೈಕುಂಠ" "ದಕ್ಷಿಣ ವಾರಣಾಸಿ" "ವೇಲಾಪುರಿ ಕ್ಷೇತ್ರ" ಇತ್ಯಾದಿಯಾಗಿ ಉಲ್ಲೇಕವಾಗಿರುವ ಕೇಶವದೇವರ ಎಲ್ಲಾ ಪೀಠಾಧಿಪತಿಗಳೂ ಸ್ತೋತ್ರಮಾಡಿದ್ದಾರೆ ದಾಸ ಮಹನೀಯರುಗಳಾದ ಪುರಂದರದಾಸರು, ಅಚಲಾನಂದರು. ಕನಕದಾಸರು, ವೈಕುಂತದಾಸರು, ಇವರು ದೇವರಸೇವೆ ಮಾಡಿದ್ದಾರೆ.

ಈ ಊರಿನ ವೈಕುಂಠದಾಸರಿಗಂತೂ ಪ್ರಸನ್ನನಾದ ಮೂರ್ತಿಯಾಗಿರುತ್ತದೆ. ಮೂರ್ತಿಯ ಧ್ಯಾನಶ್ಲೋಕ ಈ ರೀತಿ ಇದೆ

ಶ್ರೀ ಕೇಶವಂಕರತ ಲೋದ್ಧೃತರಮ್ಯ ಪದ್ಮಂ ।
ಚಂದ್ರಪ್ರಭಾ ವಿಶದ ನಿರ್ಮಲ ಪಾಂಚಜನ್ಯಂ ॥
ಮಾರ್ತಾಂಡ ಕೋಟಿರುಚಿರೋಜ್ವಲ ತೀಕ್ಷ್ಣ ಚಕ್ರಂ ।
ವಂದೇ ಗದಾಧರಹಂ ಸುರಸಿದ್ಧವಧ್ಯಂ ॥

ಸ್ಥಳಪುರಾಣದಂತೆ ಈ ಮೂರ್ತಿಯು ಚತುರ್ಯುಗದಲ್ಲಿ ಬ್ರಹ್ಮದೇವರಿಂದ ಪೂಜಿಸಲ್ಪಟ್ಟು ನಂತರ ಇಂದ್ರದ್ಯುಮ್ನ ರಾಜರಿಂದಲೂ ಪೂಜಿತರಾಗಿ ಯುಗ ಮುಗಿಯುವಕಾಲದಲ್ಲಿ ಸಹ್ಯಾದ್ರಿ ಸಾಲಿಗೆಸೇರಿದ ಚಂದ್ರದ್ರೋಣ ಪರ್ವತ (ಈಗಿನ ಬಾಬಾಬುಡನ್ ಗಿರಿ) ದಲ್ಲಿ ಭೂಸ್ಥಾಪನೆಯಾಗಿದ್ದು ದೇವಾಲಯ ನಿರ್ಮಾಣಾನಂತರ ಇತ್ತ ವಿಷ್ಣುವರ್ಧನನಿಗೂ ಅತ್ತ ಶ್ರೀ ರಾಮಾನುಜಾಚಾರ್ಯರಿಗೂ ಏಕಕಾಲದಲ್ಲಿ ಸ್ವಪ್ನ ಬಿದ್ದು ಆಗ ವಿಷ್ಣುವರ್ಧನನು ರಾಮಾನುಜಾಚಾರ್ಯರ ಹತ್ತಿರಕ್ಕೆ ಹೋಗಿ ವಿಜ್ಞಾಪಿಸಿಕೊಂಡನಂತರ ಅವರ ಸೋದರಳಿಯಂದಿರೂ ಪ್ರಮುಖ ಶಿಷ್ಯರೂ ಆದ ಶ್ರೀ ದಾಶರಥಿ ಮೊದಲಿಯಾಂಡಾರವರನ್ನೂ ಕೆಲವು ಋತ್ವಿಜರನ್ನೂ ರಾಜನೊಡನೆ ಕಳುಹಿಸಿಕೊಡಲು ಇವರು ಆ ಸ್ಥಳಕ್ಕೆ ಹೋಗಿ ನಿರ್ದಿಷ್ಟವಾದ ಸ್ಥಳವನ್ನು ಗೊತ್ತುಹಚ್ಚಿ ಭೂಶೋಧನೆ ಮಾಡಲು ಈ ಸುಂದರ ಮೂರ್ತಿಯು ದೊರಕಿತೆಂದೂ ಅದನ್ನು ಇಲ್ಲಿಗೆ ತಂದು ಪ್ರತಿಷ್ಠಾಪನೆ ಮಾಡಿ ಪೂಜಾದಿಗಳಿಗೆ ಏರ್ಪಡಿಸಿ, ಅಗ್ರಹಾರಗಳನ್ನು ಕಟ್ಟಿಸಿ, ತ್ರಿಮತಸ್ಥ ಬ್ರಾಹ್ಮಣರಿಗೂ ವಾಸಿಸಲು ಸೌಕರ್ಯವನ್ನೇರ್ಪಡಿಸಿದುದಾಗಿ ಸ್ಥಳದ ಐತಿಹ್ಯದಿಂದ ಗೊತ್ತಾಗುತ್ತದೆ. ಅಗ್ನಿ ಅಮ್ಮನವರನ್ನು ಇಲ್ಲಿಗೆ ಕರೆತರಲು ಪ್ರಯತ್ನವನ್ನು ಸಾವಕಾಶಮಾಡಿದ್ದರಿಂದ ಅವರಿಗೆ ಕೋಪ ಬಂದು ಅಲ್ಲಿಯೇ ನೆಲಸಿದರೆಂದು ಹೇಳುತ್ತಾರೆ.

ಆದೌ ಪದ್ಮಭವಾರ್ಚಿತಃ ಕೃತಯುಗೇ ತೇನೈವ ಸಂಸ್ಥಾಪಿತೋ
ದ್ರೋಣಾದ್ರೌ ತುಯುಗಾಂತಿಮೇನರಪತೇ ಶ್ರೀ ವಿಷ್ಣು ದೇವೇನಚ ।
ಭಕ್ತ್ಯಾ ಕಾರಿತ ನಿತ್ಯಧಾಮ್ನಿನಿಲಯಃ ಶ್ರೀ ಕೇಶವೋ ಭೂತ್ತದಾ
ಭೂವೈಕುಂಠಮಿದಂ ವಿಭಾತಿ ವಿದುಷಾಂ ಬೇಲಾಪುರಂ ಭೂತಲೇ ॥

ಮತ್ತೂ ಈ ಸ್ವಾಮಿಯು ಭಸ್ಮಾಸುರನನ್ನು ಸಂಹಾರ ಮಾಡಲು ದಿವ್ಯ ಮೋಹಿನೀರೂಪ ಧರಿಸಿದ್ದಾಗಿಯೂ ಸ್ಥಳಪುರಾಣದಿಂದ ವೇದ್ಯವಾಗುತ್ತದೆ. ಇದನ್ನನುಸರಿಸಿದ ಧ್ಯಾನಶ್ಲೋಕವು ಈ ರೀತಿ ಇದೆ.

ಭಜಾಮ್ಯಹಂ ಶ್ರೀ ವಸುಧಾ ಸಮೇತಂ ।
ಭಸ್ಮಾಸುರ ಧ್ವಂಸಕ ಮಿಂದುವಕ್ತ್ರಂ ॥
ಯೋಷಾಕೃತಿಂ ಬಿಭೃತ ಮಂಬುಜಾಕ್ಷಂ ।
ಶ್ರೀ ಕೇಶವಂ ದಿವ್ಯಮನಂತ ರೂಪಂ ॥

ಈಗ್ಯೆ ಸುಮಾರು 300 ವರ್ಷಗಳ ಹಿಂದೆ ಇದ್ದ ಭಾರಿ ರಥವು ಶಿಥಿಲವಾಗಿ ಹೊಸ ರಥದ ನಿರ್ಮಾಣದ ಏರ್ಪಾಡು ಆಗಬೇಕಾಗಿದೆ. ಪ್ರತಿವರ್ಷವೂ ರಥೋತ್ಸವವು ಚೈತ್ರ ಮಾಸದಲ್ಲಿ ನಡೆಯುತ್ತದೆ. ನಂತರ ನಡೆಯತಕ್ಕ ಉತ್ಸವಗಳಲ್ಲಿ 'ಮೋಹಿನೀ ಉತ್ಸವವೇ' ಕಡೆಯದು.

ರಥೋತ್ಸವಕ್ಕೆ ಪೂರ್ವಭಾವಿಯಾಗಿ ಎಲ್ಲ ವಾಹನಗಳ ಉತ್ಸವಗಳೂ ಬಹಳ ವಿಜೃಂಭಣೆಯಿಂದಲೇ ನಡೆಯುತ್ತವೆ. ಆ ಪೈಕಿ ಬೆಳ್ಳಿ ಮಂಟಪೋತ್ಸವ, ದೊಡ್ಡ ಗರುಡೋತ್ಸವ ಈ ಉತ್ಸವಗಳು ಇನ್ನೂ ವಿಜೃಂಭಣೆಯಿಂದ ನಡೆಯುತ್ತವೆ.



ಲಾಸ್ಯ ನೃತ್ಯ

ದೊಡ್ಡ ದೇವಸ್ಥಾನದ ಮೇಲೆ ಸುಮಾರು 70ಅಡಿ ಎತ್ತರದ ವಿಮಾನ ವಿತ್ತು. ಅದಕ್ಕೆ ತಾಮ್ರದ ತಗಡಿನಮೇಲೆ ಚಿನ್ನದ ಮುಲಾಮು ಹಾಕಿದ್ದಿತು. ಆ ವಿಮಾನವು ಗರ್ಭಗೃಹಕ್ಕೆ ಅಪಾಯವೆಂದು ತೋರಿಬಂದ ಕಾರಣದಿಂದಾಗಿ ಈಗ್ಗೆ ಸುಮಾರು 80 ವರ್ಷಗಳಲ್ಲಿ ಅದನ್ನು ತೆಗೆದುಹಾಕಿದ್ದಾರೆ. ಇದು ಚಿತ್ರಶಾಸನ ಇಲಾಖೆಯಲ್ಲಿದೆ. ಕಲಶವಿಲ್ಲೀ ಇರುತ್ತೆ. ಇದಕ್ಕೆ ಆಧಾರವಾದ ಶ್ಲೋಕ ಈ ರೀತಿ ಇದೆ.

೧) ಸ್ವಸ್ತಿ ಶ್ರೀಮತ್ ಶಕಾಬ್ದೆ ನಿಧಿಗಗನ ಗುಣ
ಕ್ಷಾವಿಃತೆಪ್ರಾಭ ವಾದ್ಯಮಾಸೆ ತತ್ಪೂರ್ಣಿಮಾಯಂ
ಹರಿಹರ ನೃಪತೌಪುದ್ದಪೆ ಮಂತ್ರಿ ಪರ್ಯೆ
ಶಾಸತ್ಯುರ್ವೀಂಚಸರ್ವಾಂ ಮಲಗರಸವಿಭುಃ
ಖ್ಯಾತ ಕಾಶ್ಮೀರವಂಶಃ ಪ್ರಾಸಾದಂ ಕೇಶವಸ್ಯ
ಸ್ಫುಟರುಚಿಕಲಶೇನಾಂಚಾಯೇ ತ್ಕಾಂಚನೇನ॥ ಕ್ರಿ.ಶ. ೧೩೦೯

೨) ಶ್ರೀಮತ್ಪುಣ್ಯೈಶಕಾಬ್ದೆ ಗ್ರಹಶರರಸಭೂ
ಸಮ ಗುರುದಿನೆ ಕೃಷ್ಣಭೂಪೇಚ ಸೌಮ್ಯೆ
ನಂಜಾಖ್ಯೆ ರಾಜ್ಞಿ ಶಾಸತ್ಯಖಿಳಭುವನಸಾ
ವೆಂಕಟಾಭ್ಯೋನ್ಯಸಾಲಃ ಪ್ರಾಸಾದಂ ಕೇಶವಸ್ಯ
ಸ್ಥಿರ ಕಲಶಾಯುತಂಕಾರಯಾಮಾಶ ದಿವ್ಯಂ॥ ಕ್ರಿ.ಶ. ೧೬೫೯

೩) ಶ್ರೀಮದ್ರುಮ್ಯೇಶಕಾಬ್ದೆ ನಗನಿಧಿರಸಭೂಗಣ್ಯ
ಮಾನೆಜಯಾಖ್ಯೆದ್ವಾದಶ್ಯಾಂಶುಕ್ಲಪಕ್ಷೆ ನಭಸಿ
ಗುರುದಿನೇ ಚಾಮರಾಜೈನೃಸಾಲೆ॥ ಶಾಸತ್ಯುರ್ವೀಂ
ನವಾಬ ಪ್ರಹರ ಬಹದರೇ ಹೈದರಲ್ಯಾಖ್ಯ ಭೂಪೆ
ಪ್ರಸಾದಂ ಕೇಶವಸ್ಥಿರ ಕಲಶಯುತಂ
ನಂಜಯಾರ್ಯೋಮ್ಯತಾಸೀತ್ ॥ ಕ್ರಿ.ಶ. ೧೬೯೭

ದೇವಾಲಯದ ಪ್ರಾಕಾರದಲ್ಲಿ ಧ್ವಜಸ್ಥಂಬದ ಬಳಿ ದೇವರಿಗೆ ಅಭಿಮುಖವಾಗಿ ಕೈಜೋಡಿಸಿ ನಿಂತಿರುವ ಗರುಡನ ವಿಗ್ರಹ ಇತ್ತೀಚೆಗೆ ದೇವಸ್ಥಾನದ ಜೀರ್ಣೋದ್ಧಾರ ಕಾಲದಲ್ಲಿ ಮೈಸೂರಿನ ಶಿಲ್ಪಿ ತಯಾರಿಸಿದ್ದು.



ಶ್ರೀ ಚನ್ನಕೇಶವಸ್ವಾಮಿಯವರು

ಈ ದೇವಸ್ಥಾನದ ಬಗ್ಗೆ ಕೆಲವು ದಂತಕಥೆಗಳು ಪ್ರಚಲಿತವಾಗಿವೆ ಕಪ್ಪೆಚನ್ನಿಗರಾಯ ದೇವರಿಗೆ ಹೇಳುವ ಕಥೆ–ಉಪ್ಪರಿಗೆ–ಕೊಳ (ಗಜಾಗುಂಡ) ಸೂಳೆ ಕಟ್ಟಿಸಿದಳೆಂಬುದು–ಜಕಣಾಚಾರಿ, ಡಂಕಣಾಚಾರಿ ಎಂಬ ತಂದೆಮಕ್ಕಳ ಬಾಂಧವ್ಯ–ಇಲ್ಲಿ ಕತ್ತರಿಸಿದ ಹೆಬ್ಬೆರಳು ಕೈದಾಳವಲ್ಲಿ ಬಂದಿತೆಂದೂ ಅನಂತರ ತಂದೆ ಮಕ್ಕಳಿಬ್ಬರೂ ಸೇರಿ ಏಳು ರಾತ್ರಿಗಳಲ್ಲಿ ಈ ದೊಡ್ಡ ದೇವಾಲಯವನ್ನು ಕಟ್ಟಿಸಿದರೆಂದೂ ಪ್ರತೀತಿಯಿದೆ. ಆದರೆ ಇವುಗಳೆಲ್ಲಾ ಮೇಲ್ಕಂಡದ್ದಕ್ಕೆ ವ್ಯತಿರಿಕ್ತವಾಗಿವೆ,

ವಿಷ್ಣುವರ್ಧನನ ಪೂರ್ವಜರು ಕಾಶೀ ಪಟ್ಟಣದ ಸಮೀಪದ ಬೇಲೂಪುರಿ ಯಲ್ಲಿದ್ದುದರಿಂದ ಈ ಊರಿಗೆ ಬೇಲೂರು (ವೇಲಾಪುರಿ) ಎಂದು ಹೆಸರಾಗಿದೆ

ಇಲ್ಲಿದ್ದ ವಿಶ್ವವಿದ್ಯಾನಿಲಯವನ್ನು ಮಹಾಸ್ಥಾನ ಎಂದು ಕರೆದಿದ್ದಾರೆ ಅನೇಕ ದತ್ತಿಗಳನ್ನು ಕೊಟ್ಟ ನಿದರ್ಶನವಿದೆ. ಎಲ್ಲ ಶಾಸನಗಳ ಕೊನೆಯಲ್ಲೂ ವಿಜಯನಾರಾಯಣ ಎಂದಿರುವುದರಿಂದ ಈ ದೇವರಲ್ಲಿ ಎಷ್ಟು ಭಕ್ತಿಯಿತ್ತು ಎಂಬುದು ಗೊತ್ತಾಗುತ್ತದೆ.

ಬೇಲೂರು ದೇವಾಲಯಗಳ ವಿವರಗಳು ತಲಕಾಡಿನ ಕೀರ್ತಿನಾರಾಯಣ ದೇವರ ದೇವಸ್ಥಾನದಲ್ಲಿ ದೊರೆತಿರುವ ಶಾಸನಗಳಿಂದ ಗೊತ್ತಾಗುತ್ತದೆ.

ಪೂರ್ವದಲ್ಲಿ ದೊಡ್ಡ ದೇವಸ್ಥಾನಕ್ಕೆ ಒಂದೇ ಬಾಗಿಲು ಇದ್ದು ಇತ್ತೀಚೆಗೆ ಉತ್ತರಕ್ಕೂ, ದಕ್ಷಿಣಕ್ಕೂ ಬಾಗಿಲುಗಳನ್ನಿಟ್ಟು ಅವನ್ನು ಸ್ವರ್ಗದಬಾಗಿಲೆಂದೂ ಶುಕ್ರವಾರದ ಬಾಗಿಲೆಂದೂ ಕರೆಯುತ್ತಾರೆ.

ಕರ್ನಾಟಕದಲ್ಲಿ ಇದಕ್ಕಿಂತಲೂ ಹಿರಿದಾದ ಕಲಾಕೃತಿ, ಆಸ್ತಿ ಬೇರೆಲ್ಲೂ ಇಲ್ಲ ಇಡೀ ಕರ್ನಾಟಕಕ್ಕೇ ಮಾತ್ರವಲ್ಲದೆ ಭಾರತದ ಅಸಂಖ್ಯಾತ ಕಟ್ಟಡ ಗಳಲ್ಲಿ ಈ ದೇವಾಲಯವೂ ಹೆಸರುವಾಸಿಯಾಗಿರುವುದೇ ಅಲ್ಲದೆ ಭಕ್ತಾದಿಗಳಿಗೆ ಪುಣ್ಯಕ್ಷೇತ್ರವೂ ಆಗಿದೆ ಹೊಯ್ಸಳ ರಾಜರುಗಳೂ, ವಿಜಯನಗರದ ರಾಜರು ಗಳೂ, ಮೈಸೂರು ಮಹಾರಾಜರುಗಳೂ ಶಾಸನದತ್ತವಾಗಿ ಕೊಟ್ಟಿರುವ ಅಮೂಲ್ಯವಾದ ಆಭರಣಗಳೂ, ಜಮೀನುಗಳೂ ಇವೆ. ಇವುಗಳ ಆಡಳಿತ ಮತ್ತು ಮೇಲ್ವಿಚಾರಣೆಯು ಮುಜರಾಯಿ ಇಲಾಖೆಗೆ ಒಳಪಟ್ಟಿದೆ. ಮೇಜರ್ ಮುಜರಾಯಿ ಸಂಸ್ಥೆಯಾಗಿರುವ ಈ ದೇವಸ್ಥಾನಕ್ಕೆ ಒಂಬತ್ತು ಜನ ಧರ್ಮ ದರ್ಶಿಗಳಿರುತ್ತಾರೆ. ದಿನವಹಿ ಎರಡುವೇಳೆಯೂ ಪೂಜಾದಿಗಳು ನಡೆಯುತ್ತವೆ

ದೇವಸ್ಥಾನದ ಉತ್ತರ ದಿಕ್ಕಿನ ಸಾಲುಮಂಟಪದಲ್ಲಿರುವ ಶಾಸನದ ಶ್ಲೋಕವು ತುಂಬ ಅರ್ಥಗರ್ಭಿತವಾಗಿದೆ.

ಯಂಶೈವಾ ಸಮುಪಾಸತೆ ಶಿವ ಇತಿ ಬ್ರಹ್ಮೇತಿ ವೇದಾಂತಿನಃ ।<br>
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯ್ಯಾಯಿಕಾಃ।<br>
ಅರ್ಹನಿತ್ಯಥಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃ ।<br>
ಸೋಯಂವೋ ವಿಧಧಾತುವಾಂಛಿತಫಲಂ ತ್ರೈಲೋಕ್ಯನಾಥೋಹರಿಃ॥

# ಅನುಬಂಧ

| | |
|---|---|
| ಕ್ರಿ.ಶ. 1007 | ಸಳ |
| 1022-1047 | ನೃಪಕಾಮ |
| 1047-1100 | ವಿನಯಾದಿತ್ಯ ಎರೆಯುಂಗ |
| 1100-1106 | ಬಲ್ಲಾಳ |
| 1106-1149 | 1ನೇ ವಿಷ್ಣುವರ್ಧನ |
| 1117 | ದೇವರ ಪ್ರತಿಷ್ಠಾಪನೆ |
| 1136 | ತಂದೆ ಜೀವಂತವಾಗಿರುವಾಗಲೇ ಮಗ ವಿಜಯ ನಾರಸಿಂಹನಿಗೆ ಪಟ್ಟ ಕಟ್ಟಿದ್ದು |
| 1136-1171 | ವಿಜಯನಾರಸಿಂಹನ ಆಳ್ವಿಕೆ |
| 1171-1220 | 2ನೇ ವಿಷ್ಣುವರ್ಧನ (ವೀರಬಲ್ಲಾಳ) |
| 1209 | ಜಾಲಂಧ್ರಗೋಡೆ, ಗಜಾಗುಂಡ, ಪ್ರಾಕಾರದ ಗೋಡೆ, ಪಾಕಶಾಲೆ, ವಿಜಯನಾರಾಯಣ ಸ್ವಾಮಿಯ ಭಂಡಾರಕ್ಕಾಗಿ ಕೊಠಾರ ಕಟ್ಟಿಸಿ ತಂದೆ ಅಜ್ಜಂದಿರು ಕೊಟ್ಟ ದತ್ತಿಗಳನ್ನು ಹೆಚ್ಚಿಸಿದ್ದು |
| 1234-1255 | ಮುಮ್ಮಡಿ ನಾರಸಿಂಹ |
| 1277 | ಹೊಯ್ಸಳರ ಪಾಸಾಯಿತ ಆಧಿಕಾರಿ ಕಮಲನಾಭ ತೀರ್ಥ ಯತಿಗಳಿಗೆ ಭಿಕ್ಷ ನಡೆಸಿದ್ದು, ದೇಶಾಂತರ ದಿಂದ ಬರುವ ಯಾತ್ರಾರ್ಥಿಗಳಿಗೆ ದತ್ತಿ ಕೊಟ್ಟಿದ್ದು ಮುಮ್ಮಡಿ ನಾರಸಿಂಹ, 3ನೇ ವೀರಬಲ್ಲಾಳ ವಿರೂಪಾಕ್ಷ ಬಲ್ಲಾಳ (ಹಂಪೆ) |
| 1327 | ಹೊಯ್ಸಳರ ರಾಜ್ಯ ನಾಶವಾದದ್ದು |

| | |
|---|---|
| 1359 | ಗೋಪುರ ರಿಪೇರಿಯಾದದ್ದು |
| | ಕಗ್ಗಲ್ಲಿನ 35 ಅಡಿ ಎತ್ತರದ ದೀಪಸ್ಥಂಭಪ್ರತಿಷ್ಠೆ |
| 1406 | ವಿಜಯನಗರದ ಪ್ರತಾಪ ಬುಕ್ಕರಾಯನ ಪ್ರಧಾನಿ ಹೆಗ್ಗಪ್ಪ, ವಿಠಣ್ಣಗಳು, ಚನ್ನಕೇಶವ ದೇವರಿಗೆ ಭಂಗಾರದ ಶಂಖ ಮತ್ತು ಕೊಡ ಕೊಟ್ಟಿದ್ದು |
| 1427 | ನಮ್ಮನ್ನಾಳುವ ಪುರವರಾಧೀಶ ಸೋಮನಾಥ ಬಿರುಮಣ್ಣನು ದೇವಸ್ಥಾನದ ಉಪಯೋಗಕ್ಕಾಗಿ ವರ್ಷಂಪ್ರತಿ 100 ಮೂಟೆ ಬತ್ತ ಬರುವ ಜಮೀನನ್ನು ದತ್ತಿ ಕೊಟ್ಟದ್ದು |
| 1509-1514 | ವಿಜಯನಗರದ ಅರಸರ ಭೃತ್ಯ ತಿಮ್ಮನ ಮಗ ಜಕ್ಕನೃಪನು ಚಿನ್ನದ ಗರುಡಗಂಭ ಸ್ಥಾಪಿಸಿದ್ದು |
| 1521 | ವಿಜಯನಗರದ ಕೃಷ್ಣದೇವ ಮಹಾರಾಜರ ಮಗ ನರಸಿಂಗರಾಯರು ಮಹಾಸ್ಥಾನವೂ ದಕ್ಷಿಣ ವಾರಣಾಸಿಯೂ ಆದ ಬೇಲೂರಿನ ಶ್ರೀ ಚನ್ನಕೇಶವ ದೇವರಿಗೆ ಗಂಗಾವರ, ಮಳವಳ್ಳಿ, ಕೂಸಾವರ ಈ ಗ್ರಾಮಗಳನ್ನು ದತ್ತಿ ಕೊಟ್ಟದ್ದು |
| 1565 | ವಿಜಯನಗರದ ನಾಶ |
| | ಅದೇ ಕಾಲದಲ್ಲಿ ಈ ಊರಿನಲ್ಲಿ ಶ್ರೀ ಅಮ್ಮನವರ ದೇವಸ್ಥಾನವು ತುಳುವವಂಶದವರಿಂದ ಕಟ್ಟಿದ್ದು |
| 1614 | ಶ್ರೀರಂಗರಾಜನು ಪುನಃ ಬೇಲೂರಿಗೆ ಬಂದಿದ್ದು |
| | ದೊಡ್ಡ ರಥದ ಪ್ರತಿಷ್ಠಾಪನೆ. ಆದರೆ ಆ ರಥವು ಈಗ್ಗೆ 10 ವರ್ಷಗಳಹಿಂದೆ ಮುರಿದುಹೋಗಿದೆ |
| 1655-1670 | ವೆಂಕಟಾದ್ರಿನಾಯಕರು |
| | ಇವರ ಮಗ ಪಾಳೇಗಾರನು ಟೀಪುವಿಗೆ ಸಹಾಯ ಮಾಡಿದರೆಂಬುದರ ಮೇಲೆ ಐಗೂರಿಗೆ ಓಡಿಸಿದ್ದು |

| | |
|---|---|
| 1869 | ಕಪ್ಪೆಚನ್ನಿಗರಾಯ ದೇವರಿಗೆ ಪೂಜೆ ನಿಲ್ಲಿಸಿದ್ದು |
| 1713 | ಮೈಸೂರಿನ ದೊಡ್ಡ ಕೃಷ್ಣರಾಜ ಒಡೆಯರವರು ಸೌಮ್ಯನಾಯಕಿ ಅಮ್ಮನವರಿಗೆ ಚಿನ್ನದ ಕಮಲ ಹಸ್ತವನ್ನು ಮಾಡಿಸಿಕೊಟ್ಟದ್ದು |
| 1879 | ದೊಡ್ಡ ದೇವಸ್ಥಾನದ ಮೇಲ್ಗಡೆ ತಾಮ್ರದ ತಗಡಿನ ಮೇಲೆ ಚಿನ್ನದ ಮುಲಾಮು ಮಾಡಿದ್ದ ವಿಮಾನ ವನ್ನು ತೆಗೆದಿದ್ದು |
| 1900 | ಆನೆಬಾಗಿಲಿನ ಮೇಲಿದ್ದ ಹೊಯ್ಸಳರಿಂದ ಕಟ್ಟಿಸಿದ ಇಟ್ಟಿಗೆ ಕಲಶ ತೆಗೆದಿದ್ದು |
| 1930 | ಈ ಸುಮಾರಿನಲ್ಲಿ ನಾಲ್ಮಡಿ ಕೃಷ್ಣರಾಜಒಡೆಯರ್ ರವರಕಾಲದಲ್ಲಿ ಸರ್ ಮಿರ್ಜ ಇಸ್ಮಾಯಿಲ್‌ರವರು ದಿವಾನರಾಗಿದ್ದಾಗ ಸುಮಾರು ಹದಿನೈದು ವರ್ಷ ಗಳ ಪರ್ಯಂತ ದೇವಾಲಯ ಜೀರ್ಣೋದ್ಧಾರದ ಕೆಲಸಗಳು ನಡೆದದ್ದು |
| 1940 | ಕಪ್ಪೆಚನ್ನಿಗರಾಯ ದೇವರಿಗೆ ಪೂಜಾದಿಗಳು ಪುನಃ ಪ್ರಾರಂಭವಾದದ್ದು ಮತ್ತು ಶ್ರೀ ಜಯಚಾಮರಾಜ ಒಡೆಯರ್‌ರವರಿಂದ ಕೀರ್ತಿಶೇಷರಾದ ಅವರ ದೊಡ್ಡಪ್ಪಂದಿರು ನಾಲ್ಮಡಿ ಕೃಷ್ಣರಾಜಒಡೆಯರ್ ಮತ್ತು ವಿಷ್ಣುವರ್ಧನನ ಭಕ್ತವಿಗ್ರಹಗಳ ಸ್ಥಾಪನೆ |

ಶಥಾದಿರೂಢೋ ರವಿಸಂತಿಕಾಶಃ
ಕರೋತುಯಃ ಪೂರ್ಣಮನೋರಥಾ ಜನಾ೯ |
ಪರ್ಯೇಶವೇಲಾಪುರ ಕೇಶವಸ್ಸದಾ
ದದಾತುವಃ ಸಂಪದಮಂಬುಜೇಕ್ಷಣಃ ||
ಪದ್ಮಪಾದಾಬ್ಜ ವಿನ್ಯಾಸಪವಿತ್ರೀಕೃತವಕ್ಷಸೆ |
ಪಯೋನಿಧಿನಿವಾಸಾಯಾ ಕೇಶವಾಯಾಸ್ತುಮಂಗಳಂ||

# ಹಳೇಬೀಡು



ಹಳೇಬೀಡು ದೇವಾಲಯದ ಮುಂಭಾಗದ ನೋಟ

ಈ ಊರು ಈಗ್ಯೆ ಸುಮಾರು 850 ವರ್ಷಗಳ ಹಿಂದೆ ಚೆನ್ನಾಗಿ ವೈಭವದಿಂದ ಬಾಳಿ ಮೆರೆದ ನಾಡು. ಕಾರಣಾಂತರಗಳಿಂದ ಇತ್ತೀಚೆಗೆ ಬಹಳ ಹೀನಸ್ಥಿತಿಗೆ ಬಂದಿದ್ದು ಸುಮಾರು ಮೂವತ್ತು ವರ್ಷಗಳಲ್ಲಿ ಈ ದೇವಾಲಯದ ಜೀರ್ಣೋದ್ಧಾರದ ಕೆಲಸಗಳು ನಡೆದನಂತರ ಊರು ದಿನೇ ದಿನೇ ಅಭಿವೃದ್ಧಿಗೆ ಬರುತ್ತಿದೆ. ಹವಾಗುಣವೂ ಹಿತಕರವಾಗಿದೆ. ಇಲ್ಲಿನ ದೊಡ್ಡ ಕೆರೆಯು ಕೆಳಗೆ

ಸಾವಿರಾರು ಎಕರೆ ಜಮೀನುಗಳಿದ್ದು ಸಾಲಾ ಜಮೀನುಗಳಿಗಿಂತಲೂ ಬಹಳ ಉತ್ಕೃಷ್ಟವಾಗಿದೆ. ಈಗ ಈ ಊರಿನಲ್ಲಿ ಸುಮಾರು 2500 ಪ್ರಜಾಸಂಖ್ಯೆ ಇದ್ದು ಹೋಬಳಿ ಹೆಡ್ ಕ್ವಾರ್ಟರ್ ಆಗಿಯೂ, ವಿಲೇಜ್ ಪಂಚಾಯಿತಿಯೂ ಆಗಿರುವ ಈ ಊರಿನಲ್ಲಿ ಸರ್ಕಾರಿ ಔಷಧಾಲಯ ಪ್ರೌಢಶಾಲೆ ಮೊದಲಾದ ಸೌಕರ್ಯಗಳಿವೆ. ಈಚೆಗೆ ಹಾಸನದಿಂದ ನೇರವಾಗಿ ಬಸ್ ಸೌಕರ್ಯವಿರುವುದಲ್ಲದೆ ಬೇಲೂರು-ಅರಸೀಕೆರೆ ಮಾರ್ಗವಾಗಿ ದೇವಸ್ಥಾನವನ್ನು ನೋಡಲು ಬರತಕ್ಕ ಪ್ರೇಕ್ಷಕರಿಗೆ ಬಸ್ ಸೌಕರ್ಯವೂ, ಪ್ರೇಕ್ಷಕರು ಇಳಿದುಕೊಳ್ಳಲು ಪ್ರವಾಸಿ ಮಂದಿರವೂ, ಉಪಾಹಾರಗೃಹ (ಹೋಟಲು) ಗಳೂ, ಅಂಗಡಿಗಳೂ ಇವೆ. ಭಾರತ ಸರ್ಕಾರದವರು ದಕ್ಷರಾದ ಒಬ್ಬ ಗೈಡನ್ನೂ ನೇಮಿಸಿದ್ದಾರೆ ಈ ದೇವಸ್ಥಾನವು ಒಂದೆರಡು ಘಂಟೆಗಳಲ್ಲಿ ನೋಡಿ ಮುಗಿಸುವಂತಹುದಲ್ಲ. ಅನೇಕ ಚಾರಿತ್ರಿಕವಾದ, ಶಾಸ್ತ್ರಸಮ್ಮತವಾದ, ಶಿಲ್ಪಕಲೆಯಿಂದ ಕೂಡಿರುವ ವಿಷಯಗಳಿವೆ. ಅಭಿರುಚಿಯಿರುವವರು ತಮಗೆ ಬೇಕಾದದ್ದನ್ನೆಲ್ಲಾ ಗ್ರಹಿಸಬಹುದು ಈ ಊರು ದೇವಸ್ಥಾನಕ್ಕೆ ಪ್ರಸಿದ್ಧಿಯಾಗಿರುವುದಲ್ಲದೆ, ಈಊರಿನ ಇದು ಪ್ಲೈಲಿ ಪರಿಷ್ಕರಣದಲ್ಲೂ ಸಹ ಹಿಂದೆ ಇದು ರಾಜಧಾನಿಯಾಗಿದ್ದ ಕಾಲದಲ್ಲಿ ಕೆಲಕೆಲವು ಸ್ಥಳಗಳು ಕೆಲಕೆಲವು ವಿಷಯಗಳಿಗೆ ಪ್ರಸಿದ್ಧಿಯಾಗಿರುವುದಾಗಿ ತಿಳಿಯುತ್ತದೆ. ಅವುಗಳಿಗಿನ್ನೂ ಯಾವ ಸರಿಯಾದ ಆಧಾರವೂ ದೊರೆತಿರುವುದಿಲ್ಲ. ಆದರೂ ಸಹ "ರಾಜನಸಿರಿಯೂರು" ಎಂಬುದು ರಾಜನ ಬೊಕ್ಕಸವಿದ್ದ ಜಾಗವೆಂದೂ. "ಹೂವೇನಹಳ್ಳಿ" ಎಂಬುದು ಹೂವಾಡಿಗರು ಇದ್ದಂಥ ಊರೆಂದೂ, "ಗೋವಿನಪುರ" ಎಂಬಲ್ಲಿ ಅರಮನೆಯ ಗೋವುಗಳನ್ನು ಕಟ್ಟುತ್ತಿದ್ದರೆಂದೂ, "ಕರೀಕಟ್ಟೇಹಳ್ಳಿ" ಎಂಬಲ್ಲಿ ಅರಮನೆಯ ಕರುಗಳನ್ನು ಕಟ್ಟುತ್ತಿದ್ದರೆಂದೂ, "ಪಂಡಿತನಹಳ್ಳಿ" ಎಂಬುದು ಆಸ್ಥಾನದ ಪಂಡಿತರು ವಾಸವಾಗಿದ್ದ ಜಾಗವೆಂದೂ, "ಉಮ್ಮಾದೇವಿಹಳ್ಳಿ" ಉಮಾದೇವಿಯಹಳ್ಳಿ ಎಂದೂ "ಕಾಶೀಪುರ" ಎಂಬುದು ಕಾಶಿ ಎಂದೂ, "ಹುಲಿಕೆರೆ ಪುಷ್ಕರಣಿ" ಎಂಬುದು ರಾಣೀವಾಸದವರು ಗಂಗಾಪೂಜೆ ಮಾಡುತ್ತಿದ್ದ ಸ್ಥಳವೆಂಬುದಾಗಿಯೂ ತಿಳಿದು ಬರುತ್ತದೆ. ರಾಜರ ಅರಮನೆಯು ದೇವಾಲಯದ ನೈಋತ್ಯಭಾಗದಲ್ಲಿ ಬಸ್ತೀಹಳ್ಳಿಗೆ ಹೋಗುವ ದಾರಿಯ ಎಡಭಾಗದಲ್ಲಿತ್ತೆಂದು ಗೊತ್ತಾಗುತ್ತದೆ.

## ದೊಡ್ಡ ದೇವಸ್ಥಾನ

ಇದರ ನಯನಮನೋಹರವಾದ ಸನ್ನಿವೇಶಕ್ಕೆ ಮೆರಗು ಕೊಟ್ಟಂತಿರುವ ಮುಂಭಾಗದಲ್ಲಿ ಸಾಗರದೋಪಾದಿಯಲ್ಲಿರುವ ದೊಡ್ಡ ಕೆರೆಯು ಕ್ರಿಸ್ತಶಕ 9ನೇ ಶತಮಾನದಲ್ಲಿ ರಾಷ್ಟ್ರಕೂಟದವರಿಂದ ನಿರ್ಮಿತವಾದದ್ದು. ದ್ವಾರಸಮುದ್ರವೆಂಬ ಈ ಕೆರೆಯ ಹೆಸರಿನಿಂದಲೇ ಈ ನಗರವನ್ನು ಕರೆಯಲಾಯಿತು. ದೇವಸ್ಥಾನದ ಜಗಲಿಯ ಮೇಲೆ ನಿಂತು ನೋಡಿದರೆ ಸುತ್ತಮುತ್ತಲ ಬೆಟ್ಟಗುಡ್ಡಗಳೂ, ಈಶ್ವರ ದೇವರಿಗೆ ಅಭಿಮುಖವಾಗಿ ಮಲಗಿರುವ ಎರಡು ದೊಡ್ಡ ಬಸವಣ್ಣಗಳೂ, ದಕ್ಷಿಣ ದಿಕ್ಕಿನ ಪ್ರಾಕಾರದಮೇಲೆ ಕುಳಿತಿರುವ ದೊಡ್ಡ ಗಣಪತಿ ವಿಗ್ರಹವೂ ಇವುಗಳು ಸಣ್ಣ ಬಾಲಕರಿಂದ ಮೊದಲ್ಗೊಂಡು ಎಲ್ಲರ ದೃಷ್ಟಿಯನ್ನೂ ಸೆಳೆಯುತ್ತವೆ

ದೊಡ್ಡ ದೇವಸ್ಥಾನವು ಎರಡು ದೇವಸ್ಥಾನಗಳು ಸೇರಿದ್ದಾಗಿ ಉತ್ತರ ದಿಕ್ಕಿಗೆ ಒಂದು ಬಾಗಿಲೂ, ದಕ್ಷಿಣ ದಿಕ್ಕಿಗೆ ಒಂದು ಬಾಗಿಲೂ, ಪೂರ್ವ ದಿಕ್ಕಿಗೆ ಎರಡು ಬಾಗಿಲುಗಳೂ, ಈ ರೀತಿ ನಾಲ್ಕು ಬಾಗಿಲುಗಳನ್ನುಳ್ಳದ್ದಾಗಿದೆ.

ಉತ್ತರ ದಿಕ್ಕಿನ ಕಡೆಯಿಂದ ಹೊರಟು 5-6 ಅಡಿ ಎತ್ತರದ ಜಗಲಿಯ ಮೇಲೆ ಕಟ್ಟಿರುವ ಈ ದೇವಾಲಯದ ಮೆಟ್ಟಲು ಹತ್ತಿದ ಕೂಡಲೇ ಕಾಣುವ ದ್ವಾರಪಾಲಕರ ಉಡಿಗೆ ತೊಡಿಗೆ, ಆಭರಣ, ಕಿರೀಟ ಇವುಗಳಲ್ಲಿ ಕಂಡುಬರುವ ಚಿತ್ರವಿಚಿತ್ರವಾದ ಕೆಲಸಗಳು ಇನ್ನೆಲ್ಲೂ ಇಲ್ಲ. ಕಿರೀಟದಲ್ಲಿ ಸುತ್ತಲೂ ಬಿಡಿಸಿರುವ ರುಂಡ(ತಲೆಬುರುಡೆ) ಗಳು ಟೊಳ್ಳಾಗಿವೆ. ಈ ವಿಧವಾದ ಕೆಲಸಗಳು ಈ ದೇವಾಲಯದಲ್ಲಿ ಬಹುಸಂಖ್ಯೆಯಲ್ಲಿವೆ.

ಈ ದೇವಸ್ಥಾನದ ಮೇಲ್ಛಾವಣಿಗೆ ಸೇರಿದ್ದ ಮದನಿಕೆಗಳೆಲ್ಲಾ ಅಪಹಂಸಲ್ಪಟ್ಟಿವೆ. ಅವುಗಳ ಗುರುತು ಈಗಲೂ ಹಾಗೆಯೇ ಇದೆ. ನಮೂನೆಗಿರಲಿ ಎಂದೋ ಒಂದು ಮದನಿಕೆ ಮಾತ್ರ ಇನ್ನೂ ಉಳಿದಿದೆ. ಈ ದೇವಾಲಯದ ಸುತ್ತಲೂ ಇರುವ ವಿಗ್ರಹಗಳೆಲ್ಲವೂ ಬೇಲೂರಿನ ವಿಗ್ರಹಗಳಿಗಿಂತ ದೊಡ್ಡವು. ಮತ್ತೆ ಇಲ್ಲಿ ಕಲ್ಲುಗಳ ಎರಡು ಮಗ್ಗುಲಲ್ಲೂ ಬೇರೆ ಬೇರೆ ವಿಗ್ರಹಗಳನ್ನು ಬಿಡಿಸಿರುವುದು ಅನೇಕವಿವೆ. ಬೇಲೂರಿನ ದೇವಾಲಯವನ್ನು ನೋಡಬಂದವರಾರೂ ಹಳೇಬೀಡು ದೇವಾಲಯವನ್ನು ನೋಡದೆ ಹೋಗುವುದಿಲ್ಲ.

ಕ್ರಿಸ್ತಶಕ 12-13 ನೇ ಶತಮಾನಗಳಲ್ಲಿ ಹೊಯ್ಸಳರ ರಾಜಧಾನಿಯಾಗಿದ್ದ ದ್ವಾರಸಮುದ್ರವೇ ಈಗ ಹಳೇಬೀಡು ಎಂದಾಗಿದೆ. 12 ನೇ ಶತಮಾನದಲ್ಲಿ ಹೊಯ್ಸಳರು ಕಟ್ಟಿ ಬೆಳೆಸಿದ ಈ ಪಟ್ಟಣವು ಸುಮಾರಾಗಿ 150 ವರ್ಷಗಳ ಕಾಲ ದಖನ್ನಿನೆಲ್ಲೆಲ್ಲಾ ಪ್ರಖ್ಯಾತಿಪಡೆದಿತ್ತು. 1311ರಲ್ಲಿ ಮಲ್ಲಿಕ್ ಕಾಫರ್‌ನು ಈ ಪಟ್ಟಣವನ್ನು ಲೂಟಿಮಾಡಿ ಇದ್ದ ಸಂಪತ್ತನ್ನೆಲ್ಲಾ ಅನೇಕ ಒಂಟೆಗಳಮೇಲೆ ಸಾಗಿಸಿದುದಾಗಿ ತಿಳಿಯುತ್ತದೆ. ನಂತರ ಕ್ರಿಸ್ತಶಕ 1326 ರಲ್ಲಿ ಮಹಮದ್-ಬಿನ್-ತೊಗಲಖನ ಸೈನ್ಯವು ಪುನಃ ಈ ಪಟ್ಟಣವನ್ನು ಸೂರೆ ಮಾಡಿತು. 3ನೇ ಬಲ್ಲಾಳರಾಯನ ಮರಣಾನಂತರ ಈ ಪಟ್ಟಣವು ಹೀನ ಸ್ಥಿತಿಗೆ ಬಂದಿತು.

ಕ್ರಿ.ಶ. 17ನೇ ಶತಮಾನದಲ್ಲಿ ವಿಜಯನಗರದ ಸಂತತಿಯವರೇ ಬೇಲೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡಮೇಲೆ ಹಾಳುಬಿದ್ದ ಈ ಪಟ್ಟಣವನ್ನು "ಹಳೇಬೀಡು" ಎಂದೇ ಕರೆಯಲಾಯಿತು. ಅನೇಕಬಾರಿ ಧಾಳಿಗಳಿಗೆ ಸಿಕ್ಕಿಯೂ ಉಳಿದಿರುವಂಥ ಶಿಲ್ಪಕಲಾಕೃತಿಗಳಲ್ಲದೆ ಈ ಸ್ಥಳದಲ್ಲಿ ಭೂಗತವಾಗಿರಬಹುದಾದ ವಸ್ತುಗಳು ಪ್ರಾಕ್ತನನ ಪರಿಶೋಧನೆಯನ್ನು ಕಾಣುತ್ತಿವೆ. ಈಗ ಉಳಿದಿರುವ ಇಲ್ಲಿನ ಕಲಾಕೃತಿಗಳನ್ನು ಕಂಡು ಪಾಶ್ಚಾತ್ಯ ಕಲಾವಿಮರ್ಶಕರೂ ಕೂಡ ಅತ್ಯಂತ ಅಚ್ಚರಿಗೊಂಡಿದ್ದಾರೆ.

ಈ ಊರಿನಲ್ಲಿ ಅನೇಕ ದೇವಾಲಯಗಳಿವೆ. ಅವುಗಳಲ್ಲೆಲ್ಲ ಮುಖ್ಯವಾದ ದೇವಸ್ಥಾನಗಳಾವುವೆಂದರೆ— 1 ಹೊಯ್ಸಳೇಶ್ವರ ದೇವಸ್ಥಾನ 2 ಕೇದಾರೇಶ್ವರ ದೇವಸ್ಥಾನ 3 ಜೈನ ಮಂದಿರ 4 ಊರಿನ ಒಳಭಾಗದಲ್ಲಿರುವ ರಂಗನಾಥ ದೇವಾಲಯ.

## ಹೊಯ್ಸಳೇಶ್ವರ ದೇವಾಲಯ

ಈ ದೇವಸ್ಥಾನವು ವಿಷ್ಣುವರ್ಧನಮಹಾರಾಜನ ಮುಖ್ಯ ದಂಡನಾಯಕನಾದ ಕೇತುಮಲ್ಲ ಎಂಬುವನಿಂದ ಕ್ರಿ.ಶ. 1121ರ ಸುಮಾರಿನಲ್ಲಿ ಕಟ್ಟಿಸಿದ್ದಾಗಿ ತಿಳಿಯುತ್ತದೆ. ಆದಾಗ್ಯೂ ಈ ದೇವಾಲಯದ ಕೆಲಸ ಪೂರೈಸಲು ಕೆಲವು ತಲೆಮಾರು ಅಂದರೆ ನೂರಾರು ವರ್ಷಗಳ ಕಾಲವಾದರೂ ಆಗಿರಬಹುದು.

ಆದರೂ ಅಪೂರ್ಣವಾಗಿ ಉಳಿದಿರುವ ಅನೇಕ ಕೆಲಸಗಳೂ ಇವೆ. ಈ ರೀತಿಯಲ್ಲಿ ನಿರ್ಮಿತವಾಗಿರುವ ಎರಡು ದೇವಸ್ಥಾನಗಳೂ ಒಂದೇ ಕೈಸಾಲೆಯಿಂದ ಸೇರಿಸಲ್ಪಟ್ಟಿವೆ. ಹೊರನೋಟಕ್ಕೆ ಈ ದೇವಸ್ಥಾನವೂ ಬೇಲೂರು ದೇವಸ್ಥಾನದಂತೆ ನಕ್ಷತ್ರಾಕಾರದಲ್ಲಿ ನಿರ್ಮಿತವಾಗಿದೆ. ಉತ್ತರ ಭಾಗದ ದೇವಸ್ಥಾನದಲ್ಲಿ ಶಾಂತಳೇಶ್ವರ ಎಂಬುದಾಗಿಯೂ ದಕ್ಷಿಣಭಾಗದ ದೇವಸ್ಥಾನದಲ್ಲಿ ಹೊಯ್ಸಳೇಶ್ವರ ಎಂಬುದಾಗಿಯೂ ಹೆಸರಿಟ್ಟು ಎರಡು ಗುಡಿಗಳಲ್ಲೂ ಒಂದೊಂದು ಲಿಂಗಾಕಾರದ ಈಶ್ವರ ದೇವರನ್ನು ಪ್ರತಿಷ್ಠಿಸಿದ್ದಾರೆ.

ಈ ದೇವಸ್ಥಾನದ ಒಳಗಡೆ ಈಶ್ವರನ ಮುಂದೆ ಇರುವ ಚಿಕ್ಕ ಬಸವಣ್ಣನಲ್ಲದೆ ಇದರ ಎದುರಿಗೆ ಹೊರಗೆ ಮುಖಮಂಟಪಗಳನ್ನು ಕಟ್ಟಿ ಒಂದೊಂದು ದೊಡ್ಡ ಆಕೃತಿಯ ಬಸವಣ್ಣನನ್ನು ಮಾಡಿದ್ದಾರೆ. ಇವಕ್ಕೆ ಹಾಕಿರುವ ಸರಪಳಿ ಗೆಜ್ಜೆಸರ ಮತ್ತು ನುಲಿಹಗ್ಗ ಇವುಗಳನ್ನೆಲ್ಲವನ್ನೂ ಅಂದವಾಗಿ ಮಾಡಿದ್ದಾರೆ ಹೊಯ್ಸಳೇಶ್ವರ ದೇವರಿನ ಎದುರ ದೊಡ್ಡ ಬಸವಣ್ಣನ ಹಿಂಭಾಗದ ಗುಡಿಯಲ್ಲಿ ಸಪ್ತಾಶ್ವಗಳು ಮತ್ತು ಅರುಣ ಸಮೇತ ಸೂರ್ಯನಾರಾಯಣನು ಬೃಹದಾಕಾರದಲ್ಲಿ ನಿಂತಿದ್ದಾನೆ. ಈ ಎರಡೂ ಸೇರಿದ ದೊಡ್ಡ ದೇವಸ್ಥಾನವು ಕೇತುಮಲ್ಲ ಎಂಬುವರಿಂದ ರಾಜಾ ರಾಣಿಯುವರಲ್ಲಿಟ್ಟಿದ್ದ ಅತಿಶಯ ಭಕ್ತಿಯಿಂದ ಕಟ್ಟಿಸಿದ್ದಾಗಿ ತಿಳಿದುಬರುತ್ತೆ.

ಶಿಲ್ಪಶಾಸ್ತ್ರ ಪಂಡಿತನಾದ ಫರ್ಗ್ಯೂಸನ್ನನ ಅಭಿಪ್ರಾಯದಂತೆ ಈ ದೇವಾಲಯವು "ಹಿಂದೂ ವಾಸ್ತುಶಿಲ್ಪದ ಉತ್ತಮ ಪ್ರತೀಕ"ವಾಗಿದೆ ಎಂದೂ ದೇವಾಲಯಗಳ ಹೊರಭಾಗಗಳ ಗೋಡೆಗಳ ಮೇಲೆ ಕೆತ್ತಿರುವ ಅಸಂಖ್ಯಾತ ಚಿತ್ರಗಳು "ಮನುಷ್ಯನಿರ್ಮಿತ ವಸ್ತುಗಳ ಪೈಕಿ ಅತ್ಯದ್ಭುತವಾದದ್ದೆಂದೂ" ಹೇಳಲ್ಪಟ್ಟಿದೆ. ಪ್ರಾಚೀನ ಶಿಲ್ಪಕಲೆಗಳಲ್ಲಿ ಇವಕ್ಕೆ ಸರಿಸಮಾನವಾದವು ಎಲ್ಲೂ ಇಲ್ಲ. ಮೂರು ಹಂತಗಳಲ್ಲೂ ಪ್ರದಕ್ಷಿಣಾಕಾರವಾಗಿ ಹೊರಟರೆ ಈಶ್ವರನ ದರ್ಬಾರು, ಕೃಷ್ಣನ ಬಾಲಲೀಲೆಗಳೂ, ಮೂರನೇ ಬಾಗಿಲಿನ ಆಚೆಕಡೆಗೆ ಕರ್ಣಾರ್ಜುನರ ಕಾಳಗ, ಬತ್ತಳಿಕೆ, ದಕ್ಷಿಣಲಾಗಿ ಗೋವರ್ಧನಗಿರಿ ಎತ್ತಿರುವುದು. ಪಶ್ಚಿಮ ದಿಕ್ಕಿನಲ್ಲಿ ಗಜೇಂದ್ರಮೋಕ್ಷ, ಅರ್ಜುನನು ಮತ್ಸ್ಯಯಂತ್ರವನ್ನು ಛೇದಿಸುವುದು,

ಕಿರಾತಾರ್ಜುನೀಯದ ಕಥೆ, ಕಪಿಸೈನ್ಯವು ಶ್ರೀರಾಮರಿಗೆ ಒಡವೆಗಳನ್ನು ತಲಪಿ ಸುತ್ತಿರುವುದು. ಚಕ್ರಭೀಮನ ಕೋಟೆ, ಅಭಿಮನ್ಯುವಿನ ಮರಣವಾರ್ತೆ ತಿಳಿದನಂತರ ಕೃಷ್ಣಾರ್ಜುನರು ರಥದಿಂದಿಳಿದು ಕೊಳದಲ್ಲಿ ಸ್ನಾನಮಾಡುವುದು, ರಾವಣನು ಕೈಲಾಸಪರ್ವತವನ್ನೆತ್ತುತ್ತಿರುವುದು—ಇವೇ ಮುಂತಾದ ಚಿತ್ರಗಳು ಇವೆ. ಅವುಗಳಮೇಲೆ ಮಕರ ಮತ್ತು ಹಂಸಗಳ ಸಾಲುಗಳಿವೆ. ಶಿವಾಲಯ ದಲ್ಲಿ ವಿಷ್ಣುವಿನ ಅನೇಕ ಅವತಾರಗಳನ್ನು ಚಿತ್ರಿಸಿರುವುದು ಹೊಯ್ಸಳ ರಾಜರ ಸಮನ್ವಯ ದೃಷ್ಟಿಯನ್ನು ಸೂಚಿಸುತ್ತದೆ. ದ್ವಾರಗಳ ಮೇಲ್ಭಾಗದಲ್ಲಿರುವ ನಟರಾಜನ ಚಿತ್ರವು ಅತ್ಯದ್ಭುತವಾಗಿ ನೋಡಿದರೆ ಅಮಿತಾನಂದವಾಗುತ್ತದೆ. ಸಹಸ್ರಾರು ಕೆತ್ತನೆಯ ಚಿತ್ರಗಳಿದ್ದರೂ ಒಂದರಂತೆ ಮತ್ತೊಂದಿಲ್ಲ. ಮಾನವನ ಸಹಜವಾದ ಎಲ್ಲ ಭಾವಗಳನ್ನೂ ಈ ಕಲ್ಲಿನ ಗೋಡೆಮೇಲೆ ಚಿತ್ರಿಸಲಾಗಿದೆ.



ನಾಟ್ಯ ಗಣಪತಿ

## ಕೇದಾರೇಶ್ವರ ದೇವಾಲಯ

ಈ ದೇವಾಲಯವನ್ನು ವಿಷ್ಣುವರ್ಧನಮಹಾರಾಜನ ಕಿರಿಯ: ರಾಣಿ ಕೇತಳಾದೇವಿ ಯವರ ಹೆಸರಿನಲ್ಲಿ ಕ್ರಿಸ್ತಶಕ 1219ರಲ್ಲಿ ಕಟ್ಟಿಸಲಾಯ್ತು. ಈ ದೇವಾಲಯದ ಕೆಲವು ಭಾಗಗಳು ಬಿದ್ದುಹೋದದು ವ್ಯತ್ಯಸ್ತರೂಪದಿಂದ ಸರಿಪಡಿಸಿ ರುತ್ತೆ. ಸುಂದರವಾದ ಶಿಖರ ದಿಂದ ಕೂಡಿದ ಈ ದೇವಾಲ ಯವು ದೇವನಿರ್ಮಿತವಾದ

ವಿಮಾನದಂತೆ ಕಾಣುತ್ತಿದ್ದಿತಂತೆ. ಎತ್ತರವಾದ ಚೌಕಟ್ಟಿನಮೇಲೆ ನಿಂತಿರುವ ದೇವಾಲಯದ ಗೋಡೆಗಳಮೇಲೆ ಸುತ್ತಲೂ ಸುಂದರವಾದ ಕೆತ್ತನೆಯ ಕೆಲಸ ಗಳಿವೆ. ಸುಮಾರು 180 ಪ್ರಭಾವಳಿಗಳುಳ್ಳ ಪ್ರತಿಮೆಗಳಿವೆ. ರಾಮಾಯಣ ಮಹಾಭಾರತದ ಕಥೆಗಳನ್ನು ರೂಪಿಸಲಾಗಿದೆ. ಒಳಭಾಗದಲ್ಲಿ ಉತ್ತಮ ತರ ಹದ ಕೆತ್ತನೆಗಳು, ಭುವನೇಶ್ವರಿಯಲ್ಲಿ ಕಾಣಬಹುದು ಈ ದೇವಾಲಯ ವನ್ನು ಫರ್ಗೂಸನ್ನರ "ಭಾರತೀಯ ವಾಸ್ತುಶಿಲ್ಪದ ಅನರ್ಘ್ಯ ರತ್ನ" ಎಂದಿದ್ದಾರೆ.

## (ಬಸ್ತೀಹಳ್ಳಿ) ಜೈನ ಮಂದಿರಗಳು

ಹೊಯ್ಸಳೇಶ್ವರ ದೇವಾಲಯದಿಂದ ದಕ್ಷಿಣಕ್ಕೆ ಸುಮಾರು 2ಫರ್ಲಾಂಗು ದೂರವಿರುವ ಬಸ್ತೀಹಳ್ಳಿಯ ದಕ್ಷಿಣದಲ್ಲಿ 3 ಜೈನ ದೇವಾಲಯಗಳಿವೆ ಅವು ಗಳ ಪೈಕಿ ಪಶ್ಚಿಮಕ್ಕಿರುವ ಪಾರ್ಶ್ವನಾಥಸ್ವಾಮಿ ದೇವಾಲಯವು ಮುಖ್ಯವಾ ದದ್ದು. ಈ ದೇವಾಲಯದ ವಾಸ್ತುಶಿಲ್ಪವು ಮೇಲ್ತರಗತಿಯದಾಗಿದ್ದು ಅದರ ಮುಚ್ಚಿಗೆಯ ಕೆತ್ತನೆಯ (ಭುವನೇಶ್ವರಿ) ಹಳೇಬೀಡಿನ ಚಿತ್ರಕಲೆಯ ಉತ್ತಮ ಪ್ರತೀಕವಾಗಿದೆ. ಅದನ್ನು ಹೊತ್ತಿರುವ ಹನ್ನೆರಡು ಕಂಭಗಳಲ್ಲಿ ಸುಂದರವಾಗಿ ಆಶ್ಚರ್ಯಕರವಾಗಿ ಕಡೆದಿದ್ದಾರೆ. ಪ್ರತಿ ಕಂಭದಮೇಲೂ ನಮ್ಮ ಪ್ರತಿಬಿಂಬ ವನ್ನು ಕಾಣಬಹುದು. ಈ ಪ್ರತಿಬಿಂಬಗಳು ಒಂದೊಂದು ಕಂಭದಲ್ಲಿಯೂ ಒಂದೊಂದು ರೀತಿ ಕಾಣುವಂತೆ ಕಂಭಗಳಿಗೆ ಸಾಣೆ ಹಿಡಿಯಲಾಗಿದೆ. ಕನ್ನಡಿ ಯಂತೆ ನಮ್ಮ ಮುಖವನ್ನೂ ನೋಡಿಕೊಳ್ಳಬಹುದು. ಈ ದೇವಾಲಯದಲ್ಲಿ ಇರುವ ಪಾರ್ಶ್ವನಾಥ ವಿಗ್ರಹವು ಕರಿಯ ಶಿಲೆಯಿಂದ ;ಮಾಡಲ್ಪಟ್ಟ 14 ಅಡಿ ಎತ್ತರವಿದೆ. ಈ ಮಂದಸ್ಮಿತ ಮೂರ್ತಿಯ ಗುಂಗುರು ಸುರುಳಿ ಕೂದಲಿರುವ ತಲೆಯಮೇಲೆ ಏಳು ಹೆಡೆಯ ಸರ್ಪವನ್ನು ಸುಂದರವಾಗಿ ಕಡೆದಿದ್ದಾನೆ.

ಮಧ್ಯದಲ್ಲಿರುವ ಬಸದಿಯು ಆದಿನಾಥಸ್ವಾಮಿಯದು. ಪೂರ್ವಭಾಗದ ಮಂದಿರದಲ್ಲಿ ಶಾಂತಿನಾಥಸ್ವಾಮಿಯ ವಿಗ್ರಹ ಈ ಮೇರೆ ಇರುತ್ತೆ.

## ರಂಗನಾಥಸ್ವಾಮಿ ವಿಗ್ರಹ

ಈ ವಿಗ್ರಹವು 5-6 ಅಡಿ ಉದ್ದವಿದ್ದು ಸರ್ಪದಮೇಲೆ ಮಲಗಿದ್ದಾನೆ. ನಾಭೀ ಕಮಲದಲ್ಲಿ ಬ್ರಹ್ಮನು ಜನಿಸಿದ್ದಾನೆ. ಶ್ರೀದೇವಿ ಪಾದಸೇವೆ ಮಾಡುತ್ತಿದ್ದಾಳೆ. ವಿಗ್ರಹ ತುಂಬ ನಾಜೂಕಿನ ಕೆಲಸದಿಂದ ಕೂಡಿದೆ, ಇದರ ಪ್ರಭಾವಳಿಯಲ್ಲಿ ಅಷ್ಟದಿಕ್ಪಾಲಕರನ್ನು ಕಡೆದಿದ್ದಾರೆ.



ಹಳೇಬೀಡು ದೇವಾಲಯದ ಒಂದು ಸುಂದರ ನೋಟ

# ಶ್ರವಣಬೆಳಗೊಳ

卐

ಎರಡು ಬೆಟ್ಟಗಳ ನಡುವೆ ಇರುವ ಸುಂದರವಾದ ಪಟ್ಟಣ. ಈ ಮಧ್ಯೆ ಇರುವ ಕೆರೆಗೆ "ಬೆಲ್ ಗೊಳ್" ಎಂಬ ಹೆಸರು. ಅದನ್ನೇ ಊರಿಗಿಟ್ಟಿರುವಂತಿದೆ. ಇದು ಹಾಸನ ಜಿಲ್ಲಾ ಚೆನ್ನರಾಯಪಟ್ಟಣಕ್ಕೆ ಎಂಟು ಮೈಲು ದೂರದಲ್ಲಿದೆ. ಇದು ಮುನಿಸಿಪಾಲಟಿ ಆಗಿ ಸುಮಾರು 70 ವರ್ಷವಾಯಿತು. ಅದರ ಹಿಂದೆ ಸ್ಯಾನಿಟೇಷನ್ ಉತ್ತಮವಾಗಿರಲಿಲ್ಲ.

ಜೈನ ಸಂಗಡದವರಿಗೆ ಇದು ಮುಖ್ಯ ಯಾತ್ರಾಸ್ಥಳ. ಇಲ್ಲಿ ಒಂದು ಮಠವೂ ಇದ್ದು ಅದು ಪುರಾತನವಾದ ಶಾಸ್ತ್ರ ಗ್ರಂಥಗಳಿಗೂ. ಸಂಪ್ರದಾಯಗಳಿಗೂ ಹೆಸರಾಗಿರುತ್ತೆ. ಸಮುದ್ರದ ಮಟ್ಟದಿಂದ ಸುಮಾರು 3250 ಅಡಿ ಎತ್ತರವಿರುವ ವಿಂಧ್ಯಬೆಟ್ಟ (ಇಂದ್ರಬೆಟ್ಟ) ಇದರ ಮೇಲೆ ನಿಂತಿರುವ ಗೋಮಟೇಶ್ವರ ವಿಗ್ರಹವು 57 ಅಡಿ ಎತ್ತರವಿದ್ದು ಈ ಸುತ್ತಲೂ ಅನೇಕ ಸಂಖ್ಯಾಕ ಪವಿತ್ರ ದೇವಸ್ಥಾನಗಳುಳ್ಳದ್ದಾಗಿದೆ. ಇದು ಒಂದು ಕಾಲದಲ್ಲಿ ಪ್ರಸಿದ್ಧವಾದ ಹಿತ್ತಾಳೆ ಪಾತ್ರೆಗಳ ಕೈಗಾರಿಕಾ ಕೇಂದ್ರವಾಗಿತ್ತು.

ವಿವರಗಳು ತಿಳಿಯುವಲ್ಲಿ ವರ್ಧಮಾನ (ಮಹಾವೀರ) ಇವರ (ಶೃತಕೇವಲಿ) ಶಿಷ್ಯ ಪರಂಪರೆಯ: ಭದ್ರಬಾಹು ಉಜ್ಜಯಿನಿ ದೇಶದಲ್ಲಿ ವೀರಕ್ಷಾಮ ಪ್ರಾಪ್ತವಾಗಲು: ಪರಿಹಾರೋಪಾಯವನ್ನು ಭವಿಷ್ಯವಾಣಿಯಿಂದ ತಿಳಿದು ಇಲ್ಲಿಗೆ ವಲಸೆ ಬಂದು ಬೆಟ್ಟದ ಮೇಲಿದ್ದು ಕಾಲವಾದಂತೆಯೂ ಹಾಗೆ

ವಲಸೆ ಬಂದವರಲ್ಲಿ ಅವರ ಮುಖ್ಯ ಪಟ್ಟ ಶಿಷ್ಯನಾಗಿದ್ದ ಚಂದ್ರಗುಪ್ತನೂ ಸಹ ಶಾಸ್ತ್ರ ಮರ್ಯಾದೆಯಂತೆ ಸಿಂಹಾಸನವನ್ನು ತ್ಯಜಿಸಿ ಬಂದದ್ದಾಗಿಯೂ ಅದು ಇಲ್ಲಿರುವ ಶಿಲಾಲೇಖನದಿಂದ ವ್ಯಕ್ತಪಡುತ್ತೆ. ಚಂದ್ರಗುಪ್ತನ ಮೊಮ್ಮಗ ಇಲ್ಲಿ ಬಂದು ವಿಧ್ಯಮಾನ ಪರಿಶೀಲಿಸಿರುತ್ತಾರೆ. ಬೆಟ್ಟದಮೇಲಿರುವ ಪುರಾತನ ಬಸ್ತಿಯೆ ಚಂದ್ರಗುಪ್ತನದು. ಬೆಟ್ಟದ ಮೇಲಿರುವ ಗೋಮಟೇಶ್ವರ ವಿಗ್ರಹವು ಚಾವುಂಡರಾಯನಿಂದ 983ರಲ್ಲಿ ನಿರ್ಮಿಸಲ್ಪಟ್ಟಿವೆ. ಇವರು ಗಂಗರದೊರೆ ರಾಚಮಲ್ಲನಿಗೆ ಮಂತ್ರಿಯಾಗಿದ್ದರು. ಕಲ್ಲುಕುಟ್ಟಿಗನ ಹೆಸರು ಅರಿಟ್ಟೊನೇಮಿ ಸುತ್ತಲಿನವುಗಳು ಹೊಯ್ಸಳ ವಿಷ್ಣುವರ್ಧನನ ಜನರಲ್ ಆದ ಗಂಗರಾಜನ ಕಾಲದ್ದು.

ವಿಗ್ರಹವು ಒಂದೇ ಬಂಡೆಯಿಂದ ಕಡೆದು ಮಾಡಿದಂತಿದೆ. ಈ ವಿಗ್ರಹವು ಬೆಟ್ಟದಮೇಲೆ ಉತ್ತರಾಭಿಮುಖವಾಗಿ ನಿಂತು ಊರಿನ ಸುತ್ತಲೂ ಅನೇಕ ಮೈಲುಗಳವರೆವಿಗೂ ಕಾಣುವಂತೆ ವಿರಳವಾಗಿ ಸುಂದರವಾಗಿರುವಂತಿದೆ. ತಲೆಕೂದಲು ಗುಂಗುರು ಸುರುಳಿ ಸುರುಳಿಯಾಗಿಯೂ ನೀಳವಾದ ಬಾಹುಗಳು ತೊಡೆಯ ಎರಡು ಪಕ್ಕಗಳಲ್ಲೂ, ಪಾದವು ಕಮಲದ ಮೇಲೆದ್ದು ಬಳ್ಳಿಯು ಕಾಲು–ತೊಡೆಯಮೇಲೆ ಹಬ್ಬಿ ಕೈಗಳೆರಡರಮೇಲೂ ಎಲೆ–ಹೂವ್ವು ಗೊಂಚಲಿನಿಂದ ಅಂದವಾಗಿ ಹಬ್ಬಿರುತ್ತೆ. ತೊಡೆಯವರಿಗೂ ಅಲಂಕಾರವಾಗಿ ಕಾಣುವ ಒಂದು ಆಸರೆ ಇರುತ್ತೆ. ಮೇಲೆ ವಿಗ್ರಹ ಯಾವ ಆಸರೆಯೂ ಇಲ್ಲದೆ ನಿಂತಿರುವುದು ಕಂಡುಬರುತ್ತೆ. ಸಾವಿರಾರು ವರ್ಷದ ವಿಗ್ರಹವಾದರೂ ಈಗ ಕಡೆದು ಮಾಡಿದಂತಿದೆ. ಇಂತಹ ದೊಡ್ಡ ಆಕಾರವಿದ್ದರೂ ಹಸನ್ಮುಖವಾಗಿ ಸೌಮ್ಯಕಳೆಯಿಂದ ಕೂಡಿದ್ದಾಗಿದೆ.

ಸನ್ನಿವೇಶದಿಂದ ಇದು ಒಂದು ವಿದ್ಯಾಪೀಠವಾಗಿದ್ದಾಗಿ ತಿಳಿದುಬರುತ್ತೆ 788ರಲ್ಲಿ ಹೇಮಶೀತಲಕಂಬೆಯವರೊಡನೆ ಬೌದ್ಧ ಮತದ ವಿಚಾರವಾಗಿ ವಾದವಿವಾದಗಳು ಜರುಗಿದಂತೆಯೂ ಅವರು ಇಂಡಿಯಾದ ದಕ್ಷಿಣದ ಸಿಲೋನ್ ಕಡೆಯವರೆಂದು ತಿಳಿದುಬರುತ್ತೆ. ಈ ವಿವಾದವು ವಿಜಯನಗರದ ಬುಕ್ಕರಾಜನ ಕಾಲದಲ್ಲಿ ಸಮಾಧಾನಗೊಳಿಸಲ್ಪಟ್ಟಿದ್ದಾಗಿ ಶಾಸನದಿಂದ ವ್ಯಕ್ತಪಡುತ್ತೆ.

ಮಾಗಡೀ ತಾಲ್ಲೂಕಿನಲ್ಲೂ ಒಂದು ಈ ವಿಚಾರದ ಶಾಸನವಿರುತ್ತೆ. ಇದಕ್ಕೆ ನರಸಿಂಹ ಮತ್ತು ಹೊಯ್ಸಳ ರಾಜರು ಕೊಟ್ಟ ದತ್ತಿಗಳಿರುತ್ತದೆ. ಮೈಸೂರು ರಾಜರ ಕಾಲದಲ್ಲೂ ಟೀಪುವಿನ ಕಾಲದಲ್ಲೂ ಹೆಚ್ಚು ಪ್ರೋತ್ಸಾಹ ದೊರೆಯು ತ್ತಿತ್ತು. ಈಚೆಗೆ ಅಷ್ಟಿಲ್ಲ. ಹನ್ನೆರಡು ವರ್ಷಕ್ಕೆ ಒಮ್ಮೆ ಮಂಡಪೂಜೆ ಎಂಬ ವಿಶೇಷ ಸಂಭ್ರಮದ ಅಭಿಷೇಕ ಉತ್ಸವಾದಿಗಳು ನಡೆಯುತ್ತೆ: ಲಕ್ಷಾಂತರ ಜನರು ಇಂಡಿಯಾದ ಅನೇಕ ಕಡೆಗಳಿಂದ ಬಂದು ನೋಡಿ ಸಂತೋಷಪಡು ತ್ತಾರೆ.



ಶ್ರವಣಬೆಳಗೊಳದ ಶ್ರೀ ಗೋಮಟೇಶ್ವರ.

# ಶ್ರೀ ಕ್ಷೇತ್ರ ★ ಧರ್ಮಸ್ಥಳ

ಶ್ರೀ ಕ್ಷೇತ್ರ ಧರ್ಮಸ್ಥಳವು ದಕ್ಷಿಣ ಕನ್ನಡ ಜಿಲ್ಲೆಯ ಒಂದು ಮುಖ್ಯ ಯಾತ್ರಾಸ್ಥಳವಾಗಿರುತ್ತೆ. ದಿನೇ ದಿನೇ ಅಭಿವೃದ್ಧಿ ಹೊಂದುತ್ತಲಿರುವ ಈ ಕ್ಷೇತ್ರವು ಪ್ರಕೃತಿದೇವಿಯ ಮಡಿಲಿನಲ್ಲಿ ಮಲಗಿರುವ ಮುದ್ದು ಕಂದನಂತೆ ಅತ್ಯಂತ ರಮಣೀಯವೂ, ಪ್ರೇಕ್ಷಣೀಯವೂ ಆದ ಪವಿತ್ರ ಯಾತ್ರಾಸ್ಥಳವಾಗಿದೆ. ಲಕ್ಷೋಪಲಕ್ಷ ಜನಗಳು ಈ ಕ್ಷೇತ್ರವನ್ನು ಸಂದರ್ಶಿಸಿರುತ್ತಾರೆ. ಮತ್ತೂ ಸಂದರ್ಶಿಸುತ್ತಲೂ ಇರುತ್ತಾರೆ. ಧರ್ಮಸ್ಥಳಕ್ಕೆ ಹೋಗಬೇಕಾದರೆ ಬೇಲೂರು, ಮೂಡಿಗೆರೆಯಿಂದ ಚಾರ್ಮಾಡಿ ಮಾರ್ಗವಾಗಿ ಉಜಿರೆಯಲ್ಲಿಳಿದು ಅಲ್ಲಿಂದ ಆರು ಮೈಲಿ ಹೋಗಬೇಕು. ಸಕಲೇಶಪುರದಿಂದಲೂ, ಮೂಡಿಗೆರೆಗೆ ಬಂದು ನಂತರ ಚಾರ್ಮಾಡಿ ಮಾರ್ಗವಾಗಿ ಉಜಿರೆಯಲ್ಲಿಳಿದು ಅನಂತರ ಹೋಗಬಹುದು. ಬಸ್ಸಿನ ಸೌಕರ್ಯ ಉತ್ತಮವಾಗಿದೆ. ಬೆಂಗಳೂರಿನಿಂದ ಧರ್ಮಸ್ಥಳಕ್ಕೆ ನೇರವಾದ ಬಸ್ಸಿನ ಸೌಕರ್ಯವಿದೆ. ಇನ್ನೂ ಅನೇಕ ಕಡೆ ಗಳಿಂದ ಬರಲು ಸೌಕರ್ಯವಿರುತ್ತೆ.

ಪ್ರಯಾಣಮಾರ್ಗದಲ್ಲಿ ಅದರಲ್ಲೂ ಚಾರ್ಮಾಡಿಯನ್ನು ಸೇರುವಾಗ ರಸ್ತೆಯ ಒಂದು ಪಕ್ಕದಲ್ಲಿ ಮುಗಿಲು ಮುಟ್ಟುವಂತೆ ನಿಂತಿರುವ ಪಶ್ಚಿಮ ಘಟ್ಟಗಳ ಪರ್ವತಶ್ರೇಣಿ, ಮತ್ತೊಂದು ಪಕ್ಕದಲ್ಲಿ ಪಾತಾಳದಂತಿರುವ ಕಂದಕ ಪ್ರದೇಶ. ತಿರುಗುಮುರುಗಾದ ಘಾಟಿಯ ಮಾರ್ಗ ಸರ್ಪ ಹರಿದುಹೋದಂತೆ ಮುನ್ನುಗ್ಗಿ ಹೋಗುವ ಬಸ್ಸುಗಳು ಪರ್ವತಶ್ರೇಣಿಯಿಂದ ಧುಮುಕುವ ನೀರಿನ ಝರಿಗಳು. ಪಕ್ಷಿಗಳ ಕಲಕಲ ನಿನಾದ, ನಿಸರ್ಗದೇವತೆಯ ದಿವ್ಯ ಮಂದಿರದೊಳಗೆ ಪ್ರವೇಶಮಾಡಿದಂತೆ ಅತ್ಯಾನಂದವನ್ನು ತರುವ ದೃಶ್ಯಗಳು ಎಂಥಹವರನ್ನೂ ಮುಗ್ಧರನ್ನಾಗಿ ಮಾಡಿ ಭಕ್ತಿಯ ಆವೇಶದಿಂದ ಭಗವದ್ದರ್ಶನಕ್ಕಾಗಿ ಹಾತೊರೆಯುವಂತೆ ಮಾಡುತ್ತದೆ.

ಧರ್ಮಸ್ಥಳ ಕ್ಷೇತ್ರವು ಸಮೀಪವಾದಂತೆ ಸುಮಾರು ಕ್ಷೇತ್ರಕ್ಕೆ ಇನ್ನೂ ಮೂರು ಮೈಲಿಗಳ ಅಂತರವಿರುವಾಗಲೇ ಮಾರ್ಗಮಧ್ಯದಲ್ಲಿ ಪ್ರವಹಿಸುವ ಪರಮ ಪಾವನೆಯಾದ ನೇತ್ರಾವತಿ ನದಿಯು ಕಣ್ಮನವನ್ನು ಸೆರೆಹಿಡಿಯುತ್ತದೆ. ನೇತ್ರಾವತಿ ನದಿಯಲ್ಲಿರತಕ್ಕ ಶಿಲೆಗಳು ಸಾಲಿಗ್ರಾಮ ಶಿಲೆಯಂತೆ ಬಹಳ ನುಣುಪಾಗಿಯೂ, ನಾಜೂಕಾಗಿಯೂ ಇರುತ್ತವೆ. ಈ ಕಲ್ಲುಗಳನ್ನು ನದಿಯಿಂದ ಹೊರಕ್ಕೆ ಯಾರೂ ತೆಗೆದುಕೊಂಡುಹೋಗಬಾರದೆಂಬ ನಿಯಮವಿದೆ. ಜನರೂ ಸಹ ಅದರಂತೆಯೇ ಆಚರಿಸುತ್ತಾರೆ. ಧರ್ಮಸ್ಥಳದಲ್ಲಿ ಬೆಳೆದ ತೆಂಗಿನ ಕಾಯಿಗಳನ್ನು ಸ್ವಾಮಿಯವರಿಗೇ ಸಮರ್ಪಿಸುವ ಒಂದು ಸಂಪ್ರದಾಯವಿದೆ. ಸ್ವಂತ ಅಡಿಗೆ ಮಾಡಿಕೊಳ್ಳುವವರಿಗೆ ಅಡಿಗೆಗೆ ಬೇಕಾಗುವ ಸಾಮಾನುಗಳನ್ನೆಲ್ಲ ಕೊಡುತ್ತಾರೆ ಖರ್ಚಾಗಿ ಉಳಿದ ಪದಾರ್ಥವನ್ನು ಹಿಂದಕ್ಕೆ ತೆಗೆದುಕೊಂಡು ಹೋಗಬಾರದೆಂಬ ನಿಯಮವೂ ಇದೆ.] ಶೀತಲೋದಕದಿಂದ ಕೂಡಿದ ಈ ನದಿಯಲ್ಲಿ ಮಿಂದು ಪರಿಶುದ್ಧರಾಗಿ ಯಾತ್ರಿಕರು ಮುಂದುವರಿಯುತ್ತಾರೆ.

ಧರ್ಮಸ್ಥಳ ಕ್ಷೇತ್ರದಲ್ಲಿ ಮುಖ್ಯವಾಗಿ ನೋಡಬೇಕಾದ್ದು ಶ್ರೀ ಮಂಜುನಾಥೇಶ್ವರಸ್ವಾಮಿ, ಶ್ರೀ ಪಾರ್ವತೀ ಅಮ್ಮನವರು, ಶ್ರೀ ಅಣ್ಣಪ್ಪ ಸ್ವಾಮಿಯವರು, ಶ್ರೀ ವಿಘ್ನೇಶ್ವರಸ್ವಾಮಿಯವರು ಮುಂತಾದ ದೇವ ಮೂರ್ತಿಗಳು. ಶ್ರೀ ಮಂಜುನಾಥಸ್ವಾಮಿಯವರ ಲಿಂಗವನ್ನು ಮಂಗಳೂರು ಸಮೀಪವಿರುವ ಕದರಿ ಎಂಬ ಕ್ಷೇತ್ರದಿಂದ ಶ್ರೀ ಅಣ್ಣಪ್ಪಸ್ವಾಮಿಯವರಿಂದ ತರಿಸಿ, ಮಹಾತ್ಮರಾದ ಶ್ರೀ ವಾದಿರಾಜಸ್ವಾಮಿಗಳು ಪ್ರತಿಷ್ಠಿಸಿದರೆಂಬುದಾಗಿ ಇತಿಹಾಸ. ಅಲ್ಲಿಂದ ಈ ಕ್ಷೇತ್ರವು ದಾನ, ಧರ್ಮಾದಿಗಳಿಗೆ ಪ್ರಸಿದ್ಧಿಯಾಗಿ "ಧರ್ಮಸ್ಥಳ" ಎಂದು ಪ್ರಸಿದ್ಧಿಯಾಯಿತು. ಬರತಕ್ಕ ಯಾತ್ರಾರ್ಥಿಗಳಿಗೆ ಎರಡು ವೇಳೆಯಲ್ಲಿ ಅನ್ನಸಂತರ್ಪಣೆ ನಡೆಯುತ್ತವೆ. ತಮ್ಮ ಶಕ್ತ್ಯಾನುಸಾರ ಸೇವೆಗಳನ್ನು ಮಾಡಿಸಬಹುದು. ಇಂತಹುದೇ ಸೇವೆಯನ್ನು ಮಾಡಿಸಬೇಕೆಂಡು ನಿರ್ಬಂಧವಿಲ್ಲ ದೇವಾಲಯದ ಪಾರುಪತ್ಯೇಗಾರರಿಂದ ತಮಗೆ ಬೇಕಾಗುವ ವಿವರಗಳನ್ನು ಪಡೆಯಬಹುದು. ಭಕ್ತಾದಿಗಳಿಗೆ ತಂಗಲು ಛತ್ರ ಮೊದಲಾದ ವಸತಿಗಳ ಸೌಕರ್ಯವಿರುತ್ತೆ. ವರ್ಷಕಾಲವೂ ಶ್ರೀ ಸ್ವಾಮಿಯವರಿಗೆ ಶ್ರೇಷ್ಠವಾದ ಪೂಜಾದಿಗಳು ನಡೆಯುತ್ತವೆ. ಇದಲ್ಲದೇ ದೈನಂದಿನ

ಉತ್ಸವಗಳೂ, ಪಕ್ಷೋತ್ಸವಗಳೂ, ಮಾಸೋತ್ಸವಗಳೂ ಮತ್ತು ವಾರ್ಷಿಕ ರಥೋತ್ಸವಾದಿಗಳೂ ಬಹಳ ವೈಭವದಿಂದ ನಡೆಯುತ್ತವೆ. ಕಾರ್ತೀಕದಲ್ಲಿ ನಡೆಯುವ ದೀಪೋತ್ಸವವು ಹೆಸರುವಾಸಿಯಾದುದು. ಇದು ಬಹಳ ವೈಭವದಿಂದ ನಡೆಯುತ್ತದೆ. ಲಕ್ಷಾಂತರ ಮಂದಿ ಭಕ್ತಾದಿಗಳು ಬಂದು ದೇವರ ಸೇವೆಗೈದು ಪುನೀತರಾಗುತ್ತಾರೆ. ಪ್ರತಿದಿನವೂ ಪೂಜಾದಿಗಳು ಮಧ್ಯಾಹ್ನ ಎರಡು ಘಂಟೆಯೊಳಗಾಗಿ ಮುಗಿಯುತ್ತದೆ. ಪುನಃ ರಾತ್ರಿ ಪೂಜಾದಿಗಳು ಆಯಾಯಾ ಸನ್ನಿವೇಶಕ್ಕೆ ತಕ್ಕಂತೆ ನಡೆಯುತ್ತವೆ.

ರೋಗರುಜನಾದಿಗಳಿಂದ ನರಳುತ್ತಿರುವವರೂ, ಭೂತಪ್ರೇತಾದಿಗಳಿಂದ ಪೀಡಿತರಾದವರೂ, ಜೀವನದಲಿ ನೊಂದವರೂ ಭಕ್ತಿಯಿಂದ ಶ್ರೀಯವರಿಗೆ ಹರಕೆಮಾಡಿಕೊಂಡು ಗುಣವಾದಮೇಲೆ ತಂತಮ್ಮ ಹರಕೆಗಳನ್ನು ತಪ್ಪದೆ ಸಲಿಸುತ್ತಾರೆ "ನಂಬಿಕೆಯುಳ್ಳವರಿಗೆ ಮಾತ್ರ ದೇವರು" ಎಂಬ ಪೂರ್ವಿಕರ ವಾಣಿಯ ಸತ್ಯತೆಯನ್ನು ಈ ಕ್ಷೇತ್ರದಲ್ಲಿ ಕಾಣಬಹುದು. ಶ್ರೀಯವರನ್ನು ಭಕ್ತಿಯಿಂದ ಆರಾಧಿಸಿ ಅನೇಕ ಭಕ್ತಾದಿಗಳು ತಮ್ಮ ಇಷ್ಟಾರ್ಥಗಳನ್ನು ಪಡೆದಿರುತ್ತಾರೆ. ಕಠಿಣವಾದ ಕೆಲವು ವ್ಯವಹಾರಗಳು ಅಂದರೆ ವ್ಯಾಜ್ಯಾದಿಗಳು, ಲೇವಾದೇವಿ ಮುಂತಾದ ವ್ಯವಹಾರಗಳು ಶ್ರೀಯವರ ಸನ್ನಿಧಿಯಲ್ಲಿ ನ್ಯಾಯಬದ್ಧವಾಗಿ ತೀರ್ಮಾನವಾಗಿವೆ. ಶ್ರೀ ಅಣ್ಣಪ್ಪಸ್ವಾಮಿಯವರ ಬೆಟ್ಟವು ರಮಣೀಯವಾದ ಪ್ರದೇಶ. ಈ ಬೆಟ್ಟಕ್ಕೆ ಸ್ತ್ರೀಯರು ಹತ್ತಿ ಹೋಗಬಾರದೆಂಬ ನಿಯಮವಿದೆ. ಆ ನಿಯಮವನ್ನು ಯಾರೂ ಮೀರುವಹಾಗಿಲ್ಲ. ಶ್ರೀ ಅಣ್ಣಪ್ಪಸ್ವಾಮಿಯವರು ಶ್ರೀ ಮಂಜುನಾಥಸ್ವಾಮಿಯ ದೂತನೆಂದೂ, ಮಂಜುನಾಥನ ಆಜ್ಞಾನುವರ್ತಿಯಾಗಿ ಕ್ಷೇತ್ರರಕ್ಷಕನಾಗಿ, ಆಡಳಿತ ನಡೆಸುವ ಹೆಗ್ಗಡೆಯವರ ಮನೆತನದವರಿಗೆ ಪೂರ್ಣ ಕೃಪೆತೋರಿ ಸರ್ವ ಧರ್ಮಗಳನ್ನು ಶ್ರದ್ಧೆಯಿಂದ ನಡೆಸಲು ಸಹಕಾರಿಯಾಗಿರುತ್ತಾರೆ ಬಹು ಪುರಾತನ ಕಾಲದಲ್ಲಿ ನಲ್ಯಾಡಿ ಕರೆಯಲ್ಪಡುತ್ತಿದ್ದ ಈ ಕ್ಷೇತ್ರದಲ್ಲಿ ಬರಮಪ್ಪಹೆಗ್ಗಡೆ ಎಂಬ ಹಿರಿಯ ವ್ಯಕ್ತಿಗಳೊಬ್ಬರು ಸಂಸಾರಿಗರಾಗಿ ಪತ್ನಿಪುತ್ರರೊಡನೆ ಬಹು ಧರ್ಮದಿಂದ ಸಾತ್ವಿಕ ಪ್ರವೃತ್ತಿಯುಳ್ಳವರಾಗಿ ಜೀವನ ನಡೆಸುತ್ತಿದ್ದರು. ದೈವಭಕ್ತಿ, ದಾನಧರ್ಮ

ಅತಿಥಿ ಸತ್ಕಾರಕ್ಕೆ ಈ ಮನೆತನವು ಹೆಸರುವಾಸಿಯಾಗಿತ್ತು. ಇವರು ಜೈನ ಮತಕ್ಕೆ ಸೇರಿದವರಾಗಿದ್ದರು. ಅನ್ಯಮತದ್ವೇಷರಹಿತರಾಗಿ ಸರ್ವಮತೀಯ ರನ್ನೂ ಪ್ರೇಮದಿಂದ ಕಾಣುತ್ತ ಧರ್ಮದಿಂದ ಕಾಲಯಾಪನೆ ಮಾಡುವ ಸಂದರ್ಭದಲ್ಲಿ ಒಂದಾನೊಂದು ದಿವಸ ಧರ್ಮದೇವತೆಗಳಾದ ಕಾಳರಾಹು, ಕಳಕಾರಾಯಿ, ಕುಮಾರಸ್ವಾಮಿ, ಕನ್ಯಾಕುಮಾರಿ–ಮುಂತಾದ ದೇವತೆ ಗಳು ತಂತಮ್ಮ ವಾಹನಗಳಮೇಲೇರಿ ಈ ನಲ್ಯಾಡಿ ಬೀಡಿಗೆ ಆಗಮಿಸಿದರು. ಆಗಮಿಸಿದ ದೇವತೆಗಳಿಗೆ ಬಿರಮಪ್ಪಹೆಗ್ಗಡೆಯವರು ಪ್ರೇಮಾದರದಿಂದ ಸತ್ಕಾರ ಪೂಜೆ ಮಾಡಿ ಸೇವೆ ಸಲ್ಲಿಸಿದರು. ಇದರಿಂದ ಸುಪ್ರೀತರಾದ ದೈವಗಳು ಹೆಗ್ಗಡೆ ಯವರನ್ನು ಕುರಿತು ತಾವು ಈ ಸ್ಥಳದಲ್ಲಿ ನೆಲೆಸುವುದಾಗಿಯೂ, ತಮಗೆ ಕಾಲ ಕಾಲಕ್ಕೆ ನೇಮದಿಂದ ಪೂಜೆ ವಗೈರೆ ನಡಾವಳಿಗಳನ್ನು ಸಲ್ಲಿಸುತ್ತಾ ಬಂದರೆ ಉತ್ತರೋತ್ತರ ವಂಶಾಭಿವೃದ್ಧಿಯನ್ನೂ ಸಂಪತ್ತನ್ನೂ ನೀಡುವುದಾಗಿ ವಚನ ವಿತ್ತರು. ಅದರಂತೆ ಈ ದೈವಗಳಿಗೆ ಗುಡಿಗೋಪುರಗಳನ್ನು ಕಟ್ಟಿಸಿ ನೇಮದಿಂದ ಭಕ್ತಿಯಿಂದ ಪೂಜಿಸುತ್ತಿದ್ದು ಹೆಗ್ಗಡೆ ಮನೆತನದವರು ಬಹಳ ಧರ್ಮಿಷ್ಠರಾಗಿ ಬಾಳುತ್ತಾ ಬಂದರು. ಕಾಲಾನುಕ್ರಮದಲ್ಲಿ ಶ್ರೀ ವಾದಿರಾಜಸ್ವಾಮಿಗಳು ಆಗಮಿಸಿ ಕದರೀ ಕ್ಷೇತ್ರದಿಂದ ಶ್ರೀ ಮಂಜುನಾಥಸ್ವಾಮಿಯನ್ನು ತರಿಸಿ ಪ್ರತಿಷ್ಠಿಸಿದರು. ಅಂದಿನಿಂದ ಈ ಕ್ಷೇತ್ರಕ್ಕೆ "ಶ್ರೀ ಧರ್ಮಸ್ಥಳ ಕ್ಷೇತ್ರ" ಎಂದು ಪ್ರಸಿದ್ಧ ಕ್ಷೇತ್ರವಾಯಿತು ಈ ಸ್ಥಳದ ಆಡಳಿತವರ್ಗದವರು ಜೈನ ಸಂಪ್ರದಾಯದವರು, ಪೂಜೆಸಲ್ಲಿಸುವ ಅರ್ಚಕರು ವೈಷ್ಣವಸಂಪ್ರದಾಯದವರು ಕ್ಷೇತ್ರಮೂರ್ತಿ ಶ್ರೀ ಮಂಜುನಾಥೇಶ್ವರಸ್ವಾಮಿ. ಇದು ಈ ಕ್ಷೇತ್ರದ ಹಿರಿಮೆ ಎಂದು ತಿಳಿಸಿದರೆ ತಪ್ಪಾಗಲಾರದು. ಶ್ರೀ ಬಿರಮಪ್ಪ ಹೆಗ್ಗಡೆಯವರ ಕಾಲದಿಂದಇಂದಿನವರೆಗೆ ಅನೇಕ ಹೆಗ್ಗಡೆಯವರು ಅಧಿಕಾರ ಸ್ವೀಕಾರಮಾಡಿ ಶ್ರೀ ಧರ್ಮಸ್ಥಳ ಕ್ಷೇತ್ರವನ್ನು ಬಹಳ ಅಭಿವೃದ್ಧಿಗೆ ತಂದರು. ಈ ಪೈಕಿ ದಿವಂಗತ ಶ್ರೀ ಮಂಜಯ್ಯಹೆಗ್ಗಡೆಯವರ ಕಾಲದಲ್ಲಿ ಈ ಕ್ಷೇತ್ರದ ಕೀರ್ತಿ ಕಳಶವು ಬೆಳಗಿತು. ಶ್ರೀಯುತರ ಕಾಲದಲ್ಲೇ ಸರ್ವಧರ್ಮ ಸಮ್ಮೇಳನವು ಪ್ರಾರಂಭ ವಾದದ್ದು. "ವಸಂತ ಮಹಲ್" ಎಂಬ ಭವ್ಯ ಮಂದಿರ ನಿರ್ಮಾಣ ವಾಯಿತು ಸ್ವಾಮಿಯವರಿಗೆ "ಬೆಳ್ಳಿಯ ತೇರು" ನಿರ್ಮಾಣವಾಯಿತು. ಉಜಿರೆಯಲ್ಲಿ ಶಾಲೆಶಾಲೆಯನ್ನು ಕಟ್ಟಿಸಿ ವಿದ್ಯಾಭಿವೃದ್ಧಿಗೆ ಅನುಕೂಲ

ಕಲ್ಪಿಸಲಾಯಿತು. ಅನೇಕ ಕಟ್ಟಡಗಳ ನಿರ್ಮಾಣವಾಯಿತು. ಸಂಗೀತ, ಸಾಹಿತ್ಯಪ್ರಿಯರೂ, ಮಹಾ ವಿದ್ವಾಂಸರೂ ಆದ ಶ್ರೀ ಮಂಜಯ್ಯಹೆಗ್ಗಡೆಯ ವರು ಕಲೆಗಳಿಗೂ, ಕಲೆಗಾರರಿಗೂ ಪ್ರೋತ್ಸಾಹವಿತ್ತರು. ಹೆಗ್ಗಡೆಯವರು ವಿಶೇಷ ಕೀರ್ತಿ ಸಂಪಾದಿಸಿ ದೈವಭಕ್ತರಾಗಿ ಬಾಳಿ ಇಂದಿಗೂ ಸರ್ವರ ಹೃದಯ ದಲ್ಲೂ ಅಚ್ಚಳಿಯದ ಪ್ರೇಮಮೂರ್ತಿಯಾಗಿದ್ದಾರೆ.

ಇವರನಂತರ ಅಧಿಕಾರಕ್ಕೆ ಬಂದಿರುವ ಶ್ರೀ ರತ್ನವರ್ಮರಾಜ ಹೆಗ್ಗಡೆ ಯವರು ಹಿಂದಿನವರಂತೆಯೇ ದೈವಭಕ್ತರೂ, ವಿದ್ವಾಂಸರೂ ಗುಣಶಾಲಿಗಳೂ ಆಗಿದ್ದು ವಿದ್ವಾಂಸರಿಗೆ ಆಶ್ರಯಭೂತರಾಗಿದ್ದಾರೆ. ಇವರ ಕರ್ತವ್ಯದಕ್ಷತೆ ಯಿಂದ ಶ್ರೀ ಧರ್ಮಸ್ಥಳ ಕ್ಷೇತ್ರದ ಹೆಸರು ಇಡೀ ಭರತಖಂಡದಲ್ಲಿಯೇ ಬೆಳಗು ತ್ತಿದೆ. ಅನೇಕ ನೂತನ ಕಟ್ಟಡಗಳನ್ನೂ, ಒಂದು ಧರ್ಮಛತ್ರವನ್ನೂ ಕಟ್ಟಿಸಿ ಯಾತ್ರಾರ್ಥಿಗಳು ತಂಗಲು ಅನುಕೂಲ ಕಲ್ಪಿಸಿದ್ದಾರೆ. ಈ ದುಷ್ಕಾಲದಲ್ಲೂ ಕೂಡ ಅವಿಚ್ಛಿನ್ನವಾಗಿ ಅನ್ನದಾನ ನಡೆಸುತ್ತಿದ್ದು ದಕ್ಷತೆಯಿಂದ ಕಾರ್ಯ ನಿರ್ವಹಿಸುತ್ತ ಶ್ರೀ ಮಂಜುನಾಥಸ್ವಾಮಿಯ ಪೂರ್ಣಕೃಪೆಗೆ ಪಾತ್ರರಾಗಿದ್ದಾರೆ.

ಧರ್ಮಸ್ಥಳವು ಬರೀ ಯಾತ್ರಾಸ್ಥಳ ಮಾತ್ರವಲ್ಲ. ನೋಡತಕ್ಕ ಸುಂದರ ವಾದ ಪ್ರಕೃತಿದೇವಿಯ ಬೀಡು. ಸುತ್ತಮುತ್ತಲೂ ರಮ್ಯವಾದ ಪರ್ವತಶ್ರೇಣಿ ಹಿತಕರವಾದ ವಾಯುಗುಣ, ದೇವಾಲಯದ ಎದುರಿಗಿರುವ ಉದ್ಯಾನವನವು ಬಹು ರಮ್ಯವಾಗಿದೆ ಅಲ್ಲಿ ಯಾತ್ರಾರ್ಥಿಗಳಿಗೆ ಸ್ನಾನಕ್ಕೆ ಅನುಕೂಲ ಕಲ್ಪಿಸಿ ದ್ದಾರೆ ಉದ್ಯಾನವನದ ಮಧ್ಯೆ ರಮ್ಯವಾದ ಮಂಟಪವೊಂದಿದೆ. ಹೂಗಿಡ ಗಳಿಂದಲಂಕೃತವಾದ ಈ ಉದ್ಯಾನವನವು ನೋಡತಕ್ಕ ಸ್ಥಳವಾಗಿದೆ. ಧರ್ಮ ಸ್ಥಳಕ್ಕೆ ಸ್ವಲ್ಪ ದೂರದಲ್ಲಿ ವೇಣೂರೆಂಬ ಯಾತ್ರಾಸ್ಥಳವಿದೆ. ಅಲ್ಲಿ ಗೋಮಟೇ ಶ್ವರಸ್ವಾಮಿಯ ವಿಗ್ರಹವಿದ್ದು, ಜಾತ್ರೆಯೂ ಆಗುತ್ತದೆ. ಧರ್ಮಸ್ಥಳಕ್ಕೆ ಬಂದ ವರು ಅಲ್ಲಿಗೂ ಹೋಗಿಬರುತ್ತಾರೆ ಒಟ್ಟಿನಲ್ಲಿ ತಿಳಿಸುವುದಾದರೆ, ಧರ್ಮಸ್ಥಳ ಕ್ಷೇತ್ರವು ಹಿಂದೂಗಳಿಗೆ ಒಂದು ಪವಿತ್ರವಾದ ಯಾತ್ರಾಸ್ಥಳವಾಗಿದೆ ಸರ್ವ ಭಕ್ತಾದಿಗಳೂ ಸಂದರ್ಶಿಸಲೇಬೇಕಾದ ಒಂದು ಪುಣ್ಯಭೂಮಿಯಾಗಿದೆ. ಈ ಕ್ಷೇತ್ರವು ದೇವರ ಇರುವಿಕೆಯನ್ನು ಪ್ರತ್ಯಕ್ಷವಾಗಿ ಅನುಭವ ಮಾಡಿಕೊಡುವ

ಭೂಕೈಲಾಸಕ್ಷೇತ್ರದಂತಿದೆ. ಮಾನವನಾಗಿ ಜನಿಸಿದವನು ತನ್ನ ಜೀವಮಾನದಲ್ಲಿ ಒಂದಾವರ್ತಿಯಾದರೂ ಈ ಕ್ಷೇತ್ರಸಂದರ್ಶನ ಮಾಡಿ ಶ್ರೀ ಮಂಜುನಾಥಸ್ವಾಮಿ ಯವರ ಕೃಪೆಗೆ ಪಾತ್ರನಾಗಲೇಬೇಕು. ಪರಮ ಪಾವನೆ ನೇತ್ರಾವತಿ ಸ್ನಾನ, ಶ್ರೀ ಮಂಜುನಾಥೇಶ್ವರಸ್ವಾಮಿ ಮತ್ತು ಶ್ರೀ ಪಾರ್ವತಾಮ್ಮನವರ ಸಂದರ್ಶನ ಹಾಗೂ ಶ್ರೀ ಅಣ್ಣಪ್ಪಸ್ವಾಮಿ, ಶ್ರೀ ವಿಘ್ನೇಶ್ವರಸ್ವಾಮಿ ಕೃಪೆ ಯಾತ್ರಾರ್ಥಿಗಳಿಗೆ ಉಂಟಾಗಲೆಂದು ಹಾರೈಸಿ, ಧರ್ಮಶೀಲರಾದ ಶ್ರೀ ರತ್ನವರ್ಮರಾಜ ಹೆಗ್ಗಡೆ ಯವರಿಗೆ ಸಮಸ್ತ ಸನ್ಮಂಗಳಗಳನ್ನೂ ಕರುಣಿಸಲೆಂದು ಶ್ರೀ ಮಂಜುನಾಥೇಶ್ವರ ಸ್ವಾಮಿಯನ್ನು ಭಯ ಭಕ್ತಿಯಿಂದ ಬೇಡಿಕೊಳ್ಳುತ್ತೇನೆ.

# ಶ್ರೀ ಕ್ಷೇತ್ರ ಸುಬ್ರಹ್ಮಣ್ಯ

ಶ್ರೀ ಕ್ಷೇತ್ರ ಸುಬ್ರಹ್ಮಣ್ಯವು ದಕ್ಷಿಣಕನ್ನಡ ಜಿಲ್ಲೆಯ ಒಂದು ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಸಕಲೇಶಪುರದಿಂದ ಬಿಸಲೇಘಾಟಿ ಮಾರ್ಗವಾಗಿಯೂ ಮತ್ತು ಉಪ್ಪಿನಂಗಡಿ ಮಾರ್ಗವಾಗಿಯೂ ಹೋಗಲು ಅನುಕೂಲವಿರುತ್ತದೆ ಪ್ರಕೃತಿ ಸೌಂದರ್ಯದಿಂದ ಕೂಡಿದ ಈ ಕ್ಷೇತ್ರವು ರಮಣೀಯವಾಗಿದೆ. ಇಲ್ಲಿ ಪ್ರಸಿದ್ಧಹಾದ ಕುಮಾರಧಾರಾ ನದಿ ಪ್ರವಹಿಸುತ್ತದೆ.

ಸರ್ಪರಾಜನಾದ ವಾಸುಕಿಯು ತನ್ನ ಪರಿವಾರದೊಡನೆ ಸ್ವಂದಾಂಶದಿಂದ ಕೂಡಿ ಇಲ್ಲಿ ವಾಸವಾಗಿದ್ದಾನೆ. ಹಿಂದೆ ಗರುಡನ ಬಾಧೆಯಿಂದ ತಪ್ಪಿಸಿ ಕೊಂಡು ಬ್ರಹ್ಮದೇವರ ಆಜ್ಞಾನುಸಾರವಾಗಿ ಇಲ್ಲಿಗೆ ಬಂದು ನಿಷ್ಠೆಯಿಂದ ಪರಮೇಶ್ವರನನ್ನು ಕುರಿತು ತಪಸ್ಸನ್ನಾಚರಿಸಿದ ಪವಿತ್ರವಾದ ಸ್ಥಳವಾಗಿರುತ್ತದೆ. ಪರಮೇಶ್ವರನು ಪ್ರಸನ್ನನಾಗಿ ವಾಸುಕಿಗೆ ವರವನ್ನಿತ್ತು ಮುಂದೆ ಕಾಲಾನಂತರ ತನ್ನ ಮಗನಾದ ಕುಮಾರಸ್ವಾಮಿಯು ಇಲ್ಲಿಗೆ ಬಂದು ಅಂಶಕ್ಷೇನ ನಿನ್ನಲ್ಲಿ ವಾಸಮಾಡುತ್ತಾನೆ. ಆಗ ನಿನಗೆ ಹೆಚ್ಚಿನ ಕೀರ್ತಿಯೂ, ಪೂಜ್ಯತೆಯೂ ಉಂಟಾಗುತ್ತದೆಯೆಂದೂ. ನಿನ್ನ ದರ್ಶನ ಮತ್ತು ಸೇವೆಯಿಂದ ಭಕ್ತ ಕೋಟಿಯು ಉದ್ಧಾರವಾಗುತ್ತಾರೆಂದೂ ಆಶೀರ್ವದಿಸಿದನು.

ಕುಮಾರಧಾರಾ ತೀರ್ಥಸ್ನಾನದಿಂದ ಎಂತಹ ಕಠಿಣವಾದ ರೋಗಗಳೂ ಕೂಡ ವಾಸಿಯಾಗುತ್ತವೆ. ಪರಮೇಶ್ವರನ ಪುತ್ರನಿಂದ ಹೊರತು ಬೇರೆ ಯಾರಿಂದಲೂ ತನಗೆ ಮರಣವಾಗದಂತೆ ವರವನ್ನು ಪಡೆದ ತಾರಕಾಸುರನು ಈ ಸಹ್ಯಾದ್ರಿಯ ಕ್ರೌಂಚ ಪರ್ವತವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿ ಕೊಂಡು ವರಬಲದಿಂದ ಮತ್ತನಾಗಿ ದೇವತೆಗಳನ್ನು ಜಯಿಸಿ ಅಜೇಯನಾಗಿ

ದ್ದನು ದಾಕ್ಷಾಯಿಣೀ ದೇವಿಯು ದಕ್ಷಬ್ರಹ್ಮನ ಯಜ್ಞಕುಂಡದಲ್ಲಿ ತನ್ನ ದೇಹ ವನ್ನು ಅರ್ಪಿಸಿ ಮುಂದೆ ಪರ್ವತರಾಜನಿಗೆ ಪುತ್ರಿಯಾಗಿ ಜನಿಸಿ ಪಾರ್ವತಿಯೆಂಬ ಹೆಸರನ್ನು ಪಡೆಯುತ್ತಾಳೆ. ಮಹಾ ತಪಸ್ಸಿನಲ್ಲಿ ನಿರತನಾಗಿದ್ದ ಪರಮೇಶ್ವರನ ತಪೋಭಂಗವಂ ಮಾಡಿ ಅವನ ಫಾಲಾಕ್ಷದ ಜ್ವಾಲೆಯಿಂದ ಮನ್ಮಥನು ದಹಿಸಿ ಹೋಗುತ್ತಾನೆ. ನಂತರ ದೇವತೆಗಳು ಶಿವ-ಪಾರ್ವತಿಯರ ಕಲ್ಯಾಣವನ್ನು ನಡೆಸುತ್ತಾರೆ. ಬಹುಕಾಲಾನಂತರ ಶಿವಪಾರ್ವತಿಯರಲ್ಲಿ ಕುಮಾರಸ್ವಾಮಿಯ ಜನನವಾಗುತ್ತದೆ. ಕುಮಾರಸ್ವಾಮಿಯು ದೇವಸೇನಾ ನಾಯಕನಾಗಿ ಪಟ್ಟಾಭಿಷಿಕ್ತನಾಗಿ ತಾರಕಾಸುರನ ವಧೆಗೆ ತೆರಳುತ್ತಾನೆ. ಪಾರ್ವತೀದೇವಿಯು ಶಕ್ತ್ಯಾಯುಧವನ್ನು ಕೊಟ್ಟು ಆಶೀರ್ವದಿಸಿ ಕಳುಹಿಸುತ್ತಾಳೆ. ದೇವಸೇನೆ ಯಿಂದೊಡಗೂಡಿ ಮಹಾ ಪರಾಕ್ರಮಶಾಲಿಯಾದ, ತೇಜೋಮೂರ್ತಿಯಾದ ಕುಮಾರಸ್ವಾಮಿಯು ತಾರಕಾದಿ ರಾಕ್ಷಸರನ್ನು ವಧೆಗೈದು ತನ್ನ ಆಯುಧದ ಅಲುಗನ್ನು ತೊಳೆದ ನದಿಯೇ "ಕುಮಾರಧಾರಾ" ಎಂದು ಪ್ರಸಿದ್ಧವಾಯ್ತು. ಇಲ್ಲಿ ನಡೆದ ದೇವದಾನವರ ಮಹಾಯುದ್ಧದಲ್ಲಿ ಕುಮಾರಸ್ವಾಮಿಯು ತನ್ನ ಶಕ್ತ್ಯಾಯುಧದಿಂದ ತಾರಕಾಸುರನ ರಾಜಧಾನಿಯನ್ನು ಧ್ವಂಸಮಾಡಿ ತಾರಕಾ ಸುರನನ್ನೂ ಮತ್ತು ಅವನ ಮಂತ್ರಿಯಾದ ಶೂರಪದ್ಮನೆಂಬ ರಾಕ್ಷಸನನ್ನೂ ಸಂಹರಿಸಿದನು. ತಾರಕಾಸುರನಾದರೋ ಮಡಿದನು ಆದರೆ ಶೂರಪದ್ಮನು ಮಾತ್ರ ಮಡಿದರೂ ಬದುಕಿ ಪುನಃಪುನಃ ಯುದ್ಧಕ್ಕೆ ಎದ್ದು ಬರುತ್ತಿದ್ದುದರಿಂದ ಕುಮಾರಸ್ವಾಮಿಯು ಅವನನ್ನು ಸೀಳಿ ಒಂದು ಭಾಗವನ್ನು ನವಿಲನ್ನಾಗಿ ಪರಿ ವರ್ತಿಸಿ ತನ್ನ ವಾಹನವನ್ನಾಗಿ ಇರಿಸಿಕೊಂಡನೆಂದೂ, ಇನ್ನೊಂದು ಭಾಗ ವನ್ನು ಕುಕ್ಕುಟವನ್ನಾಗಿ ಪರಿವರ್ತಿಸಿ ತನ್ನ ಧ್ವಜದಲ್ಲಿ ಇರಿಸಿಕೊಂಡನೆಂದೂ ಪುರಾಣೋಕ್ತ ಕಥೆಯಿದೆ. ಈ ಕುಮಾರಪರ್ವತದಲ್ಲೇ ಕುಮಾರಸ್ವಾಮಿಗೆ ದೇವೇಂದ್ರನ ಮಗಳಾದ ದೇವಸೇನೆಯನ್ನು ಕೊಟ್ಟು ಮಾರ್ಗಶಿರ ಶುದ್ಧ ಷಷ್ಠಿ ದಿವಸ ಬಹಳ ವೈಭವದಿಂದ ಕಲ್ಯಾಣವು ನೆರವೇರಿತು. ಆ ದಿವಸವೇ "ಸ್ಕಂದ ಷಷ್ಠಿ" ಎಂದು ಪ್ರಸಿದ್ಧಿಯಾಯಿತು. ಈ ಸ್ಕಂದಷಷ್ಠಿಯು ಬಹಳ ಪವಿತ್ರವಾದ ದಿವಸವಾಗಿದೆ. ಆ ದಿವಸವೇ ಸ್ವಾಮಿಗೆ ಪಟ್ಟಾಭಿಷೇಕವೂ ಮತ್ತು ದಿವ್ಯವಾದ ರಥದಲ್ಲಿ ಮೆರವಣಿಗೆಯೂ ನೆರವೇರಿತು. ಈಗಲೂ ಶ್ರೀ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ

ರಥವನ್ನೆಳೆಯುವುದಕ್ಕೆ ಮುಂಚೆ ಗರುಡಪಕ್ಷಿಯು ಬಂದು ರಥವನ್ನು ಮೂರು ಬಾರಿ ಪ್ರದಕ್ಷಿಣಾಕಾರವಾಗಿ ಸುತ್ತಿಹೋಗುತ್ತದೆ. ಈ ಕ್ಷೇತ್ರ ವೈಶಿಷ್ಟ್ಯತೆಗೆ ಇದೇ ಒಂದು ಸತ್ಯ ನಿದರ್ಶನ. ರಥೋತ್ಸವಕಾಲದಲ್ಲಿ ರಥವನ್ನು ಎಳೆಯುವುದಕ್ಕೆ ಬೆತ್ತವನ್ನು ಉಪಯೋಗಿಸುತ್ತಾರೆ. ದೇವರನ್ನು ದಿವ್ಯ ರಥದಿಂದ ಇಳಿಸಿದ ಕೂಡಲೇ ರಥವನ್ನು ಎಳೆಯುವುದಕ್ಕೆ ಕಟ್ಟಿದ್ದ ಬೆತ್ತವನ್ನು ಜೋರುಜೋರಾಗಿ ಕತ್ತರಿಸಿ ಪ್ರಸಾದವೆಂದು ಸ್ವೀಕರಿಸುವ ವಾಡಿಕೆಯಿದೆ. ಶ್ರೀ ಸುಬ್ರಹ್ಮಣ್ಯೇಶ್ವರ ಸ್ವಾಮಿಯ ಮೃತ್ತಿಕೆಯು ಸಕಲ ರೋಗ ಪರಿಹಾರಕವೆಂಬ ಪ್ರತೀತಿಯಿದೆ.

ಈ ಕ್ಷೇತ್ರಕ್ಕೆ "ಕುಕ್ಕೆ ಪಟ್ಟಣ" ಎಂದು ಹೆಸರಿದ್ದಿತು. ಇದು ಹಿಂದೆ ಒಬ್ಬ ಬಲ್ಲಾಳ ರಾಜನ ಆಳ್ವಿಕೆಗೆ ಒಳಪಟ್ಟಿದ್ದಿತೆಂದು ಇತಿಹಾಸವಿರುತ್ತದೆ. ಶ್ರೀ ಸುಬ್ರಹ್ಮಣ್ಯಸ್ವಾಮಿಯ ದರ್ಶನ ಮತ್ತು ಪೂಜಾದಿಗಳಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು ಇಲ್ಲಿ ಸಂತರ್ಪಣೆ ಸಂದರ್ಭದಲ್ಲಿ ಹರಕೆ ಹೊತ್ತ ಭಕ್ತಾದಿಗಳು ಊಟಮಾಡಿದನಂತರ ಉಚ್ಛಿಷ್ಟದ ಎಲೆಗಳ ಮೇಲೆ ಹೊರಳುತ್ತಾ ಬಂದು ನಂತರ ಕುಮಾರಧಾರಾ ನದಿಯಲ್ಲಿ ಸ್ನಾನಮಾಡುವರು. ಇದರಿಂದ ಸಮಸ್ತ ರೋಗಗಳೂ ಪರಿಹಾರವೆಂದೂ, ಈ ಸೇವೆಯಿಂದ ಶ್ರೀ ಸುಬ್ರಹ್ಮಣ್ಯಸ್ವಾಮಿ ಸಂತುಷ್ಟನಾಗುವನೆಂದೂ ನಂಬಿಕೆಯಿದೆ. ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಕುಕ್ಕೆ ಸುಬ್ರಹ್ಮಣ್ಯವೆಂದೂ ಹೆಸರು. ಕುಕ್ಕೇಲಿಂಗವೆಂಬುದು ಪ್ರಸಿದ್ಧವಾದ ಈಶ್ವರಲಿಂಗ ವಾಸುಕಿಯು ಪೂಜೆಗೈಯ್ಯುತ್ತಿದ್ದ ಪರಮೇಶ್ವರಲಿಂಗವೇ ಇದು. ಹಿಂದೆ ಈ ಕ್ಷೇತ್ರವು ಬಹು ದೊಡ್ಡ ಪಟ್ಟಣವಾಗಿತ್ತೆಂಬುದಕ್ಕೂ ಬಹು ಜನಸಾಂದ್ರತೆ ಇತ್ತೆಂಬುದಕ್ಕೂ ನಿದರ್ಶನಗಳಿವೆ. ಇದನ್ನು ಕುಕ್ಕೆಪಟ್ಟಣವೆಂಬುದಾಗಿಯೂ ಕರೆಯುತ್ತಿದ್ದರು. ಕಾಲಪರಿಸ್ಥಿತಿಯಿಂದ ಈಗ ಸಣ್ಣದೊಂದು ಅಗ್ರಹಾರವಾಗಿದೆ ಇಲ್ಲಿ ನೋಡತಕ್ಕ ಅನೇಕ ಪವಿತ್ರಸ್ಥಳಗಳಿವೆ. ಆದಿ ಸುಬ್ರಹ್ಮಣ್ಯ ಕುಮಾರ ಧಾರಾ ನದಿ. ಕುಮಾರ ಪರ್ವತ, ರುದ್ರಪಾದ, ಸುಬ್ರಹ್ಮಣ್ಯ ಮಠ, ಬಿಲ ದ್ವಾರ, ಕಾಶೀಕಟ್ಟೆ—ಮುಂತಾದ ಅನೇಕ ಪ್ರೇಕ್ಷಣೀಯವಾದ ಸ್ಥಳಗಳಿವೆ. ರುದ್ರಪಾದದಲ್ಲಿ ಪಿತೃಗಳಿಗೆ ನಡೆಸಬೇಕಾದ ಶ್ರಾದ್ಧಾದಿ ಕರ್ಮಗಳನ್ನು ಮಾಡುತ್ತಾರೆ. ಕುಮಾರಪರ್ವತದಲ್ಲಿ ಅತ್ಯಾಶ್ಚರ್ಯಕರವಾದ ಲಿಂಗ ಮತ್ತು ಸರ್ಪಾಕೃತಿಯುಳ್ಳ ಕಲ್ಲುಗಳು ಉದ್ಭವಿಸುತ್ತವೆ.

ಭಕ್ತಾದಿಗಳು ಅದನ್ನು ಪೂಜೆಗಾಗಿ ತೆಗೆದುಕೊಂಡುಹೋಗುವುದುಂಟು. ಸ್ಕಂದಾಂಶಸಂಭೂತನಾದ ಶ್ರೀ ಸುಬ್ರಹ್ಮಣ್ಯೇಶ್ವರನಿಗೆ ಬೆಳಗಿನಿಂದ ಸಾಯಂಕಾಲ ಪರ್ಯಂತವೂ ಪೂಜೆ, ಮಂಗಳಾರತಿ, ಪ್ರಸಾದವಿನಿಯೋಗ, ಬ್ರಾಹ್ಮಣಸುವಾಸಿನಿಯರ ಸಂತರ್ಪಣೆ, ಶಾಸ್ತ್ರೋಕ್ತನಾಗಿಯೂ, ನೇಮ ನಿಷ್ಠೆಯಿಂದಲೂ ನಡೆಯುತ್ತವೆ. ಯಥೇಚ್ಛವಾದ ಅನ್ನದಾನ ನಡೆಯುತ್ತದೆ. ದೇವಾಲಯಕ್ಕೆ ಅನೇಕ ಉಂಬಳಿಗಳಿರುತ್ತವೆ. ಇಲ್ಲಿ "ಬಾರಾ ಹಜಾರ್ ಸಂತರ್ಪಣೆ" ಎಂಬುದು ಇತಿಹಾಸ ಪ್ರಸಿದ್ಧವಾದುದು. ಮೈಸೂರು ಶ್ರೀಮನ್ಮಹಾರಾಜರ ಕಡೆಯಿಂದಲೂ ಸೇವಾದಿಗಳು ನಡೆಸಲ್ಪಡುತ್ತವೆ.

ಕುಮಾರಸ್ವಾಮಿಯು ವಾಸುಕಿಯನ್ನೂ, ಸಮಸ್ತ ಲೋಕವನ್ನೂ ಕುರಿತು ಹೀಗೆ ನಿರೂಪಿಸುತ್ತಾನೆ—"ನಾಗರಾಜನಾದ ವಾಸುಕಿಯು ಈ ಕಲ್ಯಾಣ ಮಂಟಪವೆಂಬ ವಲ್ಮೀಕದಲ್ಲಿ ಸಕುಟುಂಬನಾಗಿ ವಾಸಿಸುತ್ತಾನೆ. ಅಂಶಸ್ವೇನ ನಾನೂ ಅವನಲ್ಲಿ ಪರಿವಾರಸಮೇತ ನಿತ್ಯಸನ್ನಿಹಿತನಾಗಿರುತ್ತೇನೆ. ನನ್ನ ಶಾಸನ ರೀತಿ ಸರ್ವರೂ ನಮ್ಮನ್ನಾರಾಧಿಸಿ ಸರ್ವಾಭೀಷ್ಟಸಿದ್ಧಿ ಹೊಂದಿ. ಈ ಕುಮಾರ ಕ್ಷೇತ್ರವು ನನಗೆ ಅತ್ಯಂತ ಪ್ರಿಯವಾದ್ದು ಮಾರ್ಗಶಿರ ಶುದ್ಧ ಷಷ್ಠಿಯೇ ಸ್ಕಂದ ಷಷ್ಠಿಯೆಂಬ ಪ್ರಸಿದ್ಧ ಮಹೋತ್ಸವದ ದಿನವಾಗಿರಲಿ. ಪುತ್ರವಾತ್ಸಲ್ಯದಿಂದಲೂ ಕ್ಷೇತ್ರಮಹಿಮೆಯಿಂದಲೂ ಪಾರ್ವತೀಯುಕ್ತನಾದ ಪರಮೇಶ್ವರನು ಕುಕೆ ಲಿಂಗವೆಂಬ ಹೆಸರಿನಿಂದ ಇಲ್ಲೇ ವಾಸವಾಗಿದ್ದಾನೆ. ಇಲ್ಲಿ ವಿಶೇಷ ತೀರ್ಥಸ್ನಾನ ರಥೋತ್ಸವ, ಮಹಾಪೂಜೆ, ಬ್ರಾಹ್ಮಣಭೋಜನ, ಮಡೇಸೇವೆ—ಮುಂತಾದ ಉತ್ಸವಗಳು ಸ್ಥಿರವಾಗಿ ನಡೆದು ಸಮಸ್ತ ಭಕ್ತರಿಗೂ ಕಲ್ಯಾಣಪರಂಪರೆಗಳನ್ನು ನೀಡಲಿ. ಈ ಕ್ಷೇತ್ರದರ್ಶನದಿಂದ ಮನಃಪ್ರಸನ್ನತೆಯೂ ಶ್ರೇಯಸ್ಸೂ ಉಂಟಾಗಲೆಂದು ಮಹಾತ್ಮರಾದ ಕಶ್ಯಪರು ತಮ್ಮ ಧರ್ಮಪತ್ನಿಯಾದ ಅದಿತಿದೇವಿಗೆ ನಿರೂಪಿಸಿ ಕ್ಷೇತ್ರಸ್ಮರಣೆಯಿಂದ ಪರಮಾನಂದವನ್ನನುಭವಿಸಿದರು.

ಷಡಾನನಂ ಕುಂಕುಮ ರಕ್ತವರ್ಣಂ
ಮಹಾಮತಿಂ ದಿವ್ಯ ಮಯೂರವಾಹನಂ ।
ರುದ್ರಸ್ಯ ಸೂನುಂ ಸುರಸೈನ್ಯನಾಥಂ
ಗುಹಂ ಸದಾ ಶರಣಮಹಂ ಪ್ರಪದ್ಯೇ ॥

## ಶ್ರೀ ಚನ್ನಕೇಶವ ಸುಪ್ರಭಾತ

ಶ್ರೀ ವೇಲಾಪುರ ನಾಯಕಂ ಮುರರಿಪುಂ ವಂದೇ ಸದಾಹಂವಿಭುಂ
ಭಕ್ತಾರ್ತಿಕ್ಷಪಣ ಪ್ರವೀಣಮನಘಂ ಶ್ರೀ ಕೇಶವಂ ಶಾಶ್ವತಂ ।
ಭಾಷಾಭಾಸಿತ ದಿಙ್ಮುಖಂ ಪ್ರವಿಲಸದ್ವೇದಾವಳಿ ವೇಷ್ಟಿತ
ಪ್ರಾಂತೇ ಚಂಪಕ ಸಂಜ್ಞಿಕೇ ವರವನೇ ತಿಷ್ಠಂತಮವ್ಯಾಹತಂ ॥ ॥ ೧ ॥

ದೇವಕೀನಂದನ ಶ್ರೀಶಕಲ್ಯಾಸಂಧ್ಯಾ ಪ್ರವರ್ತತೇ
ಉತ್ತಿಷ್ಠ ಕಮಲಾಕಾಂತ ಭುವನಂ ಮಂಗಳಂಕುರು ॥ ೨ ॥

ಸಮಸ್ತಮಾತಃ ಸರಸೀರುಹಾಕ್ಷಿ      ಶ್ರೀ ವಿಷ್ಣುವಕ್ಷಸ್ಥಲಲಾಸಹಾಸೆ
ಶ್ರೀ ಸೌಮ್ಯರೂಪೇ ಶ್ರಿತಕಲ್ಪವಲ್ಲಿ      ಚಂದ್ರಾನನೇ ದೇವಿ ತವಸುಪ್ರಭಾತಂ ॥ ೩ ॥

ತೇ ಸುಪ್ರಭಾತ ಮುಖಿಲಾವನ ಬಂಧುರೀತಿ      ಶ್ರೀಕೈರವಾಕ್ಷಿ ಜನನಿ ಪ್ರಿಯಮೋಹನಾಸ್ತೆ
ಪದ್ಮಾಸನೇಶ ಸುರರಾಡ್ಯನಿತಾಭಿವಂದ್ಯೆ      ವೇಲಾಪುರೀಶದಯಿತೆ ಭವತುಪ್ರಸನ್ನೆ ॥ ೪ ॥

ಯೇವಾಲಾಪಿಲ್ಲಮುಖ ವಿಪ್ರವರಾಶ್ಚ ಸಂಧ್ಯಾ      ನಿರ್ಮಾರ್ಯ್ಯಯಾನಿ ಕಮಲಾನಿ ಮನೋಹರಾಣಿ
ಸಂಗ್ರಹ್ಯಪಾದಯುಗ ಮರ್ಚಯಿತುಂ ಪ್ರಪನ್ನಾ      ಲಕ್ಷ್ಮೀಶ ಕೇಶವಹರೇ ತವ ಸುಪ್ರಭಾತಂ ॥ ೫ )

ಬ್ರಹ್ಮೇಶ ಷಣ್ಮುಖ ಪುರಂದರ ದೇವವರ್ಯಾಃ      ಪ್ರಾಚೀನ ಕೌರ್ಮಕಿಟಕಾದಿ ಚರಿತ್ರಜಾಲಂ
ವೈದಗ್ಧ್ಯಶುದ್ಧ ವಚಸಾವಿಭುಧಾ ಸ್ತುವಂತಿ      ಲಕ್ಷ್ಮೀಶ ಕೇಶವಹರೇ ತವ ಸುಪ್ರಭಾತಂ ॥ ೬ ॥

ಪೌರಂದರೀ ದಿಗಮಲಾಂಗ ನಯಾಪ್ರಸೂತಃ      ಸೂರ್ಯೋನಿಶಂ ಕಮಲಮೀಲನ ಮಾಶುಹರ್ತುಂ
ಪೂರ್ವಾದ್ರಿ ಶೃಂಗ ಮಧಿರೋಹತಿ ಲೋಕಬಂಧುಃ      ಲಕ್ಷ್ಮೀಶ ಕೇಶವಹರೇ ತವ ಸುಪ್ರಭಾತಂ ॥ ೭ ॥

ನಾಗಾಂತಕಾಗ್ರಜ ಪರೀತ ದಿಗಂತರಾಂತೆ ಹಂಸಾದ್ಯಶೇಷ ಖಿಹಗಾ ಪರಿಸರ್ಪಯಂತಿ
ವೃಕ್ಷಾಗ್ರಕೋಟರ ಮುಖಾತ್ಸಹಸಾಪ್ರಹೃಷ್ಟಾಃ ವೇಲಾಪುರೀಶ್ವರವಿಭೋಃ ತವ ಸುಪ್ರಭಾತಂ ॥ ೮ ॥

ಕಾಸಾರಜಾಲ ಜಲಜಾನಿ ವಿಕಾಸಿತಾನಿ ಸೂರ್ಯಸ್ಯಭಾಸುರಕರಾಃ. ಪರಿಶಂಸದಂತಿ
ವಾತಾಸ್ಸುಶೀತಲಕರಾಃ ಪ್ರವಹಂತಿ ಸೌಖ್ಯಂ ಲಕ್ಷ್ಮೀಶ ಕೇಶವಹರೇ ತವ ಸುಪ್ರಭಾತಂ ॥ ೯ ॥

ವೇಲಾಪುರೀಶ ರಮಣೀಯ ರಮಾವಿಲೋಲ ಲೋಕತ್ರಯೀ ವಿಗತ ಸಾಂದ್ರ ತಮಃಪ್ರವಾಹ
ಪಾಣೌನಿಮಂತ್ರಿತಜಲೇನ ಕೃತಾರ್ಘ್ಯದಾನೆ ಕಿಂತ್ವಂ ಪ್ರಸುಪ್ಯಸಿ ಹರೇ ಭವಸುಪ್ರಬುದ್ಧಃ ॥ ೧೦ ॥

ಯಸ್ತ್ರಾಮಸೀಜನಿತ ಯೋಗವಿಯೋಗ ದುಃಖ ತಾತಪ್ಯಮಾನ ಪರಿಚಿಂತಿತ ಚಕ್ರವಾಕಃ
ವಿತ್ರೋದಯರ ಸಮುಪವೀಕ್ಷ್ಯ ಸತೀ ಸಮೇತಃ ಶ್ರೀ ಸೌಮ್ಯಕೇಶವಹರೇ ತವ ಸುಪ್ರಭಾತಂ ॥ ೧೧ ॥

ಸೇನಾಧಿನಾಥ ನಿಹಿತಾಖಿಲ ಲೋಕರಕ್ಷ ಭೋಗೀಂದ್ರಭೋಗ ಪರಿಕಲ್ಪಿತ ಯೋಗನಿದ್ರಾಂ
ತೇಗೀಸ್ಪತಿರ್ವದತಿ ವಾಸರ ಶುದ್ಧಿಮಾರಾತ್ ತ್ಯಕ್ತ್ವಾತ್ವಥಜಾಗ್ರಹಿ ಹರೇ ತವ ಸುಪ್ರಭಾತಂ ॥ ೧೨ ॥

ಶ್ರೀಮನ್ನಭೀಷ್ಟದಹರೆ ತವಸದ್ಗುಣೌಘಾ ಗಾಯತ್ತತೀವ ಮುದಿತಸ್ಸತು ನಾರದೋಪಿ
ತಂತ್ರೀಪ್ರಕರ್ಷ ವಿಮಲಸ್ವನಯಾ ವಿಪಂಚ್ಯಾ ಶ್ರೀ ಸೌಮ್ಯಕೇಶವಹರೇ ತವ ಸುಪ್ರಭಾತಂ ॥ ೧೩ ॥

ಶ್ರೀ ವಿಷ್ಣುತೀರ್ಥ ತಟವಾಸ ಸಮಾಹಿತಾತ್ಮಾ ತ್ರೈಲೋಕ್ಯಸುಂದರ ಕೃಪಾ ಪರಿಪಾಕಮೂರ್ತೆ
ಲಕ್ಷ್ಮೀಕ್ಷಣಪ್ರಚುರ ಕೈರವ ಪೂರ್ಣಚಂದ್ರ ಶ್ರೀ ಸೌಮ್ಯಕೇಶವಹರೇ ತವ ಸುಪ್ರಭಾತಂ ॥ ೧೪ ॥

ಶ್ರೀಮಚ್ಛಠಾರಿ ಮನಾಥ ಯತೀಂದ್ರಮುಖ್ಯಾಃ ಶ್ರೀ ಯಾಮುನಾರ್ಯವರ ವೇಂಕಟದೇಶಿಕಾಖ್ಯಾಃ
ತ್ವತ್ಪಾದಪದ್ಮಯುಗಳಂ ಪರಿತೋರ್ಚನಾಯ ಪ್ರಾಪ್ತಾಶ್ಚ ಕೇಶವಹರೇ ತವ ಸುಪ್ರಭಾತಂ ॥ ೧೫ ॥

ಬ್ರಹ್ಮೇಂದ್ರ ರುದ್ರವಸಿತಾಃಪ್ರಸಭಂ ಸಮೇತ್ಯಾ ಮಾಂಗಲ್ಯವಾಚ ಮಧಿಕಂ ತವಭೂದಂತಿ

ಲಕ್ಷ್ಮೀಸ್ತಥಾ ಕನಕಕುಂಭಸಪೂರಿತೋಽದ್ಯ
ಭೂದೇವಿಕಾ ಪಿಮಣಿದರ್ಪಣ ಮಾಶುಧೃತ್ವಾ
ಭಕ್ತಾಸ್ತುರಾರ್ಚನ ವಿಶಾಲ ಸರೋಜನೇತ್ರ
ಶ್ರೀ ಮತ್ಸ್ಯ ಕೂರ್ಮ ವರಕೋಲ ನರಸಿಂಹ ವರ್ಣಿ
ಕೃಷ್ಣಾವತಾರ ಕಲಿಭಂಜನ ವಾಜಿವಕ್ತ್ರಂ
ಶ್ರೀ ವಿಷ್ಣು ಸಾಗರ ನಿಮಜ್ಜನ ನಿರ್ಮಲಾಂಗಾ
ದ್ವಾರೇ ವಸಂತಿ ತವದರ್ಶನ ಕೌತುಕೇಹಾ
ಕ್ಷೇತ್ರಾದ್ರಿನಾಥ ಕಮಲಾಕಮನೀಯ್ಯಮೂರ್ತೇ
ತಾಪಹಾರಿ ಸೇವಿತ ಪದಾಬ್ಜ ಕರೀಂದ್ರ ರಕ್ಷ
ಯೇ ಮಾನವಾಹ್ಯನುದಿನಂ ಶುಭದಂ ಪಠಂತಿ
ತೇ ಪ್ರಾಪ್ಯ ವೈಷ್ಣವಪದಂ ಯಮುನಾವಗಮ್ಯಂ
ಶ್ರೀ ಸೌಮ್ಯನಾಯಕಿ ಸರೋಜದಳಾಯತಾಕ್ಷಿ
ಭಕ್ತಾವಳಿಪ್ರಥಿತ ಕಲ್ಪಮಹೀರುಹಾಖ್ಯೆ
ಶ್ರೀ ಸೌಮ್ಯಕೇಶವ ವರಮಾಧವ ಭೂಷಣಾಯ
ಕಂದರ್ಪಕೋಟಿ ಸದೃಶಾದ್ಭುತ ದಿವ್ಯಮೂರ್ತೇ
ಶ್ರೀ ಭಾಷ್ಯಕಾರ ಪದ ಪಂಕಜ ಪಾದುಕಾಖ್ಯ
ಭಕ್ತಾಸ್ತುರಮ್ಯ ಕಮನೀಯ ವಧೂಸ್ವರೂಪ

ಆದಾಯ ಭೋದಯತಿ ಕೇಶವ ಸುಪ್ರಭಾತಂ ‖ ೧೬ ‖
ತ್ವಾಮಾಹ್ವಯತ್ಯಖಿಲ ಸತ್ವವಿಧಾನ ಮೂರ್ತೇ
ಶ್ರೀ ಸೌಮ್ಯಕೇಶವ ಹರೇ ತವ ಸುಪ್ರಭಾತಂ ‖ ೧೭ ‖
ಶ್ರೀ ಭಾರ್ಗವೇಶ ರಘುನಾಯಕ ರೌಹಿಣೇಯ
ಶ್ರೀ ಸೌಮ್ಯಕೇಶವ ಹರೇ ತವ ಸುಪ್ರಭಾತಂ ‖ ೧೮ ‖
ಶ್ರೇಯೋರ್ಥಿನೋ ಹರ ವಿರಂಚಿ ಸನಂದಮುಖ್ಯಾಃ
ಶ್ರೀ ಸೌಮ್ಯಕೇಶವ ಹರೇ ತವ ಸುಪ್ರಭಾತಂ ‖ ೧೯ ‖
ಕಂಜಾನನೇಶ ಕಲಿನಾಶನ ಕಲ್ಪವೃಕ್ಷ
ಶ್ರೀರಂಗನಾಥ ವರಸೌಮ್ಯ ತವ ಸುಪ್ರಭಾತಂ ‖ ೨೦ ‖
ಭಕ್ತ್ಯಾ ವಿಶುದ್ಧ ಹೃದಯಾಂಬುವಿ ಸರ್ವಕಾಮಾ
ಮೋದಂತಿ ಸೌಮ್ಯವರಕೇಶವ ಸುಪ್ರಭಾತಂ ‖ ೨೧ ‖
ಪದ್ಮಾಲಯೇ ವಿನುತ ಮಂಗಳ ದಿವ್ಯರೂಪೆ
ವೇಲಾಪುರೀಶ ದಯಿತೇ ತವ ಸುಪ್ರಭಾತಂ ‖ ೨೨ ‖
ನೀಳಾಪ್ರಿಯ ಪ್ರಥಿತ ಷಡ್ಗುಣ ಪೂರ್ಣಕಾಮ
ವೇಲಾಪುರೀಶ ಭಗವನ್ ತವ ಸುಪ್ರಭಾತಂ ‖ ೨೩ ‖
ಶ್ರೀರಾಮ ಮಿಶ್ರಪರಿಪೂಜಿತ ಪಾದಪದ್ಮ
ವೇಲಾಪುರೀಶ ಭಗವಂಸ್ತವ ಸುಪ್ರಭಾತಂ ‖ ೨೪ ‖

ಸ್ವಾಮಿನ್ ಕೃಪಾಸ್ಮೃಕೃಪಯಾ ತವಭಕ್ತವರ್ಗ
ಸ್ತತ್ಪಾದಪದ್ಮ ಯುಗಳಾರ್ಚನ ತತ್ಪರಾಸ್ತ್ಯಾ
ಪೂರ್ವಾದ್ರಿಶೃಂಗ ಮಧಿರುಹ್ಯ ಸಹಸ್ರರಶ್ಮಿ
ಸ್ತತ್ತ್ವೋದ್ಯಭೀತಮಿವಲೀನ ಮಹೋತ್ತಮಃಸ್ತು
ಪ್ರಾಭಾತಿಕಸ್ಥಲತಿ ಗನ್ಧವಹೋದ್ಯಮನ್ದಂ
ಬೃಂದಾರಕೇಂದ್ರ ಪರಿವಂದಿತ ಸುಂದರಾಂಘ್ರೇ
ಆನಂದ ಕಂದಳಿತ ಸುಂದರ ಮಂದಹಾಸ
ಮಂದಾರುವೃಂದಸಕಲಾರ್ಥದ ಸುಂದರಾಂಘ್ರೇ
ಶ್ರೀ ಕೇಶವಾಮೃತ ಸರೋವರ ಶಂಖಕುಂಭ
ತೀರ್ಥೇಷು ದಿವ್ಯಬದರೀಪ್ರಮುಖೇಷು ನಿತ್ಯಂ
ಶ್ರೀವತ್ಸದೀಯ ಪದಪಂಕಜ ದಿವ್ಯಪೂಜಾಂ
ಪ್ರಾಭಾತಿಕಾನನುಗ್ರಹಾಣ್ಣ ತವಾರ್ಚನಾರ್ದ್ರೇ
ಸ್ವಾಮಿನ್ ಕದಾಚನ ಪರಾನಿಗಮಾನ್ತ ನಿಷ್ಠಾಃ
ಸ್ತತ್ಸಙ್ಗ ಶೋಭಿಮುಪವರ್ಣ್ಯ ಮಿತುಂ ಪ್ರವೃತ್ತಾಃ
ಆನನ್ದ ಯಾದ್ಯ ಭಗವನ್ ತವಭೃತ್ಯವರ್ಗ
ಆನನ್ದ ಯಾಶ್ರಿತ ಸಮಸ್ತ ಜನಾಚರಂಚ

ವಿಜ್ಞಾಪನಾಮಿಹಸುಖಂ ಕರುಣಾಂಬುರಾಶೇ
ಮುದ್ಯೋದಯಂತಿ ಭಗವಂಸ್ತವ ಸುಪ್ರಭಾತಂ ॥ ೨೫ ॥
ಭರ್ಗಸ್ವಾನ್ನಿಕಾಸಯತಿ ಪಂಕಜ ಕುಟ್ಮಲಾನಿ
ವೇಲಾಪುರೀಶ ಭಗವಂಸ್ತವ ಸುಪ್ರಭಾತಂ ॥ ೨೬ ॥
ಮಂದಾರಸಂದ ಕುಸುಮಾಹೃತ ದಿವ್ಯಗನ್ಧಃ
ವೇಲಾಪುರೀಶ ಭಗವಂಸ್ತವ ಸುಪ್ರಭಾತಂ ॥ ೨೭ ॥
ಸೌಂದರ್ಯಪೂರ್ಣ ಕರುಣಾಕರ ದೀನಬಂಧೋ
ಮಂದಾರದೇವ ಭಗವಂಸ್ತವ ಸುಪ್ರಭಾತಂ ॥ ೨೮ ॥
ವೇದಾವತೀನ್ಯಹರಿ ಪ್ಲಾವಿವಾಹಿನೀಷು
ಪಾಪಪ್ರಿಯಾದ್ಯ ಭಗವಂಸ್ತವ ಸುಪ್ರಭಾತಂ ॥ ೨೯ ॥
ಕರ್ತುಂಹಿ ಭಕ್ತನಿವಹೊದ್ಯನೀಕ್ಷತೇತ್ವಾಂ
ವೇಲಾಪುರೀಶ ಭಗವಂಸ್ತವ ಸುಪ್ರಭಾತಂ ॥ ೩೦ ॥
ವೇದ್ಯೈಶ್ಯಕಾದಿ ಮುಖನಿರ್ಗತ ಸೂಕ್ತಿಬೃನ್ದೈಃ
ವೇಲಾಪುರೀಶ ಭಗವಂಸ್ತವ ಸುಪ್ರಭಾತಂ ॥ ೩೧ ॥
ಮಾನನ್ದಸುಂದರ ಕಟಾಕ್ಷ ಸುಧಾಭಿಷೇಕೈಃ
ವೇಲಾಪುರೀಶ ಭಗವಂಸ್ತವ ಸುಪ್ರಭಾತಂ ॥ ೩೨ ॥

ಸಂಪೂರ್ಣಂ



ಹಳೇಬೀಡು ದೇವಾಲಯದಲ್ಲಿರುವ ದೊಡ್ಡ ಬಸವ

★

## ಗಂಧದಮರದಿಂದ ಮಾಡಿದ ದೇವರ ವಿಗ್ರಹಗಳು, ಕ್ಯಾಲೆಂಡರ್‌ಗಳು, ಚನ್ನಪಟ್ಟಣದಲ್ಲಿ ತಯಾರಾದ ಬಣ್ಣದ ಆಟದ ಸಾಮಾನುಗಳು ಹಾಗೂ ಪಂಚಲೋಹದಿಂದ ಮಾಡಿದ ವಿಗ್ರಹಗಳು

ಬೇಲೂರು ದೇವಸ್ಥಾನದ ಎದುರುಭಾಗದಲ್ಲಿರುವ

# ಪಿಲಿಗ್ರಿಮ್ಸ್ ಹೋಂ

ಇವರಲ್ಲಿ ದೊರೆಯುತ್ತವೆ.



**ಬಿ. ಎಲ್, ಆನಂದರಾವ್,**

ಟೂರಿಸ್ಟ್ಸ ಗೈಡ್, ಬೇಲೂರು.

(ಹಾಸನ ಡಿ॥ ಮೈಸೂರು ಸ್ಟೇಟ್)

卐

ಶ್ರೀ ಕೃಷ್ಣ ಪವರ್ ಪ್ರೆಸ್, ಬೇಲೂರು.